# ತರಬೇತಿ ತಂತ್ರಗಳು

ಸಂಪನ್ಮೂಲ ಪುಸ್ತಕ




ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸ್ಟಡೀಸ್ ಟ್ರಸ್ಟ್, ಬೆಂಗಳೂರು



ಮೊದಲ ಮುದ್ರಣ : 2001

ಪುಟಗಳು : 38

ಸಂಪಾದನಾ ಸಂಯೋಜನೆ : ಶ್ರೀಮತಿ ಮೀರಾ ಎಂ.

ಸಂಗ್ರಹ ಮತ್ತು ಪ್ರಸ್ತುತಿ : ಶ್ರೀಮತಿ ಜಯಲಕ್ಷ್ಮಿ. ಟಿ.

ಕನ್ನಡಕ್ಕೆ ಅನುವಾದ : ಶ್ರೀ ಮಾಧವ ಐತಾಳ್

ಆರ್ಥಿಕ ಬೆಂಬಲ : **ACTION AID INDIA**

ಪ್ರಕಾಶಕರು : ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸ್ಟಡೀಸ್ ಟ್ರಸ್ಟ್
ಎನ್-601, ನಾರ್ತ್ ಬ್ಲಾಕ್, ಮಣಿಪಾಲ್ ಸೆಂಟರ್
ಡಿಕೆನ್ಸನ್ ರಸ್ತೆ, ಬೆಂಗಳೂರು -560 042.
ದೂರವಾಣಿ : 5583701
ಫ್ಯಾಕ್ಸ್ : 5583704
E-mail : isstban@giasbg01.vsnl.net.in

ಚಿತ್ರಗಳು ಮತ್ತು ವಿನ್ಯಾಸ : ಸಿ.ಡಿ.ಎಲ್., ಬೆಂಗಳೂರು

ಮುದ್ರಣ

*ಈ ಮಾಹಿತಿಯನ್ನು ಅಪ್ಪಣೆ ಪ ... ಅದರ ಪ್ರತಿಗಳನ್ನು, ನಮ್ಮ
ಮಾಹಿತಿಗಾಗಿ ಕಳುಹಿಸಿಕೊಡಬೇ ...

# ತರಬೇತಿ ತಂತ್ರಗಳು

## ಸಂಪನ್ಮೂಲ ಪುಸ್ತಕ




ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸ್ಟಡೀಸ್ ಟ್ರಸ್ಟ್
ರಾಷ್ಟ್ರೀಯ ಸಂಪನ್ಮೂಲ ಕೇಂದ್ರ
ಬೆಂಗಳೂರು
2001

# ಪ್ರಸ್ತಾವನೆ

ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕಳೆದ ಎಂಟು ವರ್ಷಗಳಿಂದ ನಮ್ಮನ್ನು ತೊಡಗಿಸಿಕೊಂಡಿದ್ದು, ಪಂಚಾಯತಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಮಹಿಳೆಯರಿಗೆ ವಿವಿಧ ತರಬೇತಿಗಳನ್ನು ನೀಡುತ್ತ ಬಂದಿದ್ದೇವೆ. ಸಂಘಟನೆ (ಸಂಸ್ಥೆ) ಹಾಗೂ ಅದರಲ್ಲಿ ಪಾಲ್ಗೊಂಡಿರುವ ಸದಸ್ಯರ ಬದ್ಧತೆಯನ್ನು ಆಧರಿಸಿ ಸೂಕ್ತ ತರಬೇತಿ ತಂತ್ರವನ್ನು ಅಳವಡಿಸಿಕೊಂಡು ಬೆಳೆಯುತ್ತ ಸಾಗಿದ್ದೇವೆ. ನಾವು ನಡೆಸಿದ ಕ್ಷೇತ್ರ ಕಾರ್ಯಕ್ರಮಗಳು ಮತ್ತು ಕಾರ್ಯಾಗಾರಗಳಲ್ಲಿ ನವಸಾಕ್ಷರರು ಮತ್ತು ಕಡಿಮೆ ಶಿಕ್ಷಣ ಪಡೆದ ಮಹಿಳೆಯರಿಗಾಗಿ ವಿಭಿನ್ನ ಚಟುವಟಿಕೆಗಳು, ಪ್ರತ್ಯೇಕ ತರಬೇತಿ ತಂತ್ರಗಳನ್ನು ಬಳಸಿಕೊಳ್ಳುತ್ತ ಬಂದಿದ್ದೇವೆ. ಆ ತರಬೇತಿ ತಂತ್ರಗಳನ್ನು ಆಸಕ್ತ ಕಾರ್ಯಕರ್ತರಿಗೆ, ತರಬೇತಿ ನಡೆಸುವವರಿಗೆ ಸುಲಭವಾಗಿ, ತಕ್ಷಣ ಅಳವಡಿಸಿಕೊಳ್ಳಲು ಸಾಧ್ಯವಾಗುವಂತೆ, ದಾಖಲಿಸುವ ಹಂಚಿಕೊಳ್ಳುವ ಉದ್ದೇಶದೊಂದಿಗೆ ಈ ಸಂಪನ್ಮೂಲ ಪುಸ್ತಕವನ್ನು ಪ್ರಕಟಿಸುತ್ತಿದ್ದೇವೆ. ಉದ್ದೇಶಿತ ಗುರಿ ತಲುಪಲು ನಿಮ್ಮ ಪಾತ್ರ ಮಹತ್ತರವಾದುದು.

ಪಂಚಾಯತಿ ಸದಸ್ಯರು ಎದುರಿಸುತ್ತಿರುವ ಸಮಸ್ಯೆಗಳು ಯಾವುವು ಅಥವಾ ತರಬೇತಿಯಿಂದ ಅವರು ಕಲಿಯುವುದೆಷ್ಟು ಎಂಬುದನ್ನು ಕುರಿತು ಅವರಿಂದ ವಿಷಯ ಹೊರಡಿಸುವುದು ಕಷ್ಟ. ಅವರು ಚಿಪ್ಪಿನಿಂದ ಹೊರಬಂದು ಕಾರ್ಯಾಗಾರಗಳಲ್ಲಿ ತೆರೆದ ಮನಸ್ಸಿನಿಂದ ಭಾಗವಹಿಸುವಂತೆ ಮಾಡಲು ಸಂಯೋಜಕರು ಬಹಳ ಕಷ್ಟಪಡಬೇಕಾಗುತ್ತದೆ. ಪ್ರತೀ ಶಿಬಿರಾರ್ಥಿಯ ಪ್ರತಿಕ್ರಿಯೆ ವಿಭಿನ್ನವಾಗಿರುವುದರಿಂದ ಪ್ರತೀ ಕಾರ್ಯಾಗಾರವೂ ಹೊಸ ವಿಷಯ ತಿಳಿಸುತ್ತದೆ ಹಾಗೂ ಅನುಭವ ಬೆಳೆಯುತ್ತದೆ.

ಈ ಸಂಪನ್ಮೂಲ ಹೊತ್ತಿಗೆ ಎರಡು ಭಾಗಗಳನ್ನೊಳಗೊಂಡಿದೆ. ಒಂದು ಗುಂಪು ಚರ್ಚೆಗಳಲ್ಲಿ ಬಳಸುವ ತಂತ್ರಗಳನ್ನು, ಇನ್ನೊಂದು ಶಿಬಿರಾರ್ಥಿಗಳ ಸಂಪೂರ್ಣ ಭಾಗವಹಿಸುವಿಕೆಯ ಅಗತ್ಯವಿರುವ ಆಟಗಳನ್ನು ಒಳಗೊಂಡಿದೆ. ಈ ಎಲ್ಲ ತಂತ್ರಗಳೂ ಒಂದಲ್ಲ ಒಂದು ರೀತಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿರುವ ಮಹಿಳೆಯರ ಸಶಕ್ತೀಕರಣಕ್ಕೆ ಸಂಬಂಧಿಸಿದೆ. ಇವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುವ ಮೂಲಕ ಮಹಿಳೆಯರು ಕಲಿಯುವ, ಹಂಚಿಕೊಳ್ಳುವ ಸಂತಸವನ್ನು ಅನುಭವಿಸುವಂತೆ ಮಾಡಬಹುದಾಗಿದೆ. ಸಕ್ರಿಯ ಪಾಲುದಾರಿಕೆ ಮತ್ತು ಹಂಚಿಕೊಳ್ಳುವಿಕೆ ಮೂಲಕ ಸಂವಹನ ಕೌಶಲ್ಯದ ಅಚ್ಚಳ ಹಾಗೂ ಕಲಿಕೆಯ ಮೌಲ್ಯವನ್ನು ಹೆಚ್ಚಿಸಲು ಬಳಸಬಹುದಾದ ಸಾಮರ್ಥ್ಯ ಈ ತಂತ್ರಗಳಿಗಿದೆ.

# ಪರಿವಿಡಿ

## ಭಾಗ - 1

# ಕತ್ತರಿಸಿಟ್ಟ ಮಾದರಿಗಳು :

ತರಬೇತಿಯ ಈ ವಿಧಾನದಲ್ಲಿ ಕಾರ್ಡ್‌ಬೋರ್ಡ್‌ಗಳಿಂದ ತಯಾರಿಸಿದ ಮಾದರಿ (ಮಾಡೆಲ್)ಗಳನ್ನು ಬಳಸಲಾಗುತ್ತದೆ. ಗ್ರಾಮೀಣ ಸಮುದಾಯದ ವಿವಿಧ ಸದಸ್ಯರನ್ನು ಪ್ರತಿನಿಧಿಸುವ ಈ ಕಟೌಟ್‌ಗಳನ್ನು ಒಂದು ಥರ್ಮೋಕೋಲ್ ಹಲಗೆಯ ಮೇಲೆ ಜೋಡಿಸಲಾಗುತ್ತದೆ. ಗ್ರಾಮ ಪಂಚಾಯತಿಯ ಸಂಬಂಧಿಸಿದ ವಿವಿಧ ಸಂಗತಿಗಳಿಗೆ ಸಂಬಂಧಿಸಿದ ಕಲಿಕೆಗೆ ಈ ಮಾದರಿಯನ್ನು ಬಳಸಿಕೊಳ್ಳಬಹುದು.

ಉದಾಹರಣೆ : ಗ್ರಾಮಸಭೆ, ಮಾದರಿ ಗ್ರಾಮ, ಗ್ರಾಮಪಂಚಾಯತಿ, ಸಭೆ, ಸಾಮಾಜಿಕ ವಿಶ್ಲೇಷಣೆ ಇತ್ಯಾದಿ....

*ವಿಷಯ :* ಗ್ರಾಮಸಭೆ

*ಉದ್ದೇಶ :* ಒಂದು ಗ್ರಾಮಸಭೆ ಯಾವ ರೀತಿ ನಡೆಯುತ್ತದೆ ಎಂಬುದನ್ನು ಚುನಾಯಿತ ಮಹಿಳಾ ಪ್ರತಿನಿಧಿ (EWR)ಗಳ ಸಹಭಾಗಿತ್ವದಲ್ಲಿ ಮನದಟ್ಟು ಮಾಡಿಸುವುದು.

*ಗುಂಪಿನ ಗಾತ್ರ :* 20-25 ಸದಸ್ಯರು

*ಅಗತ್ಯ ಸಮಯ :* 1 ಗಂಟೆ

*ಸಂಪನ್ಮೂಲ ವ್ಯಕ್ತಿ :* ಒಬ್ಬ ಅನುಭವಿ ತರಬೇತುದಾರರು

*ಅಗತ್ಯ ಸ್ಥಳ :* ಒಂದು ದೊಡ್ಡ ಕೋಣೆ ಅಥವಾ ಸಭಾಂಗಣ.

*ಅಗತ್ಯ ಸಲಕರಣೆಗಳು :* ಗ್ರಾಮದ ವಿವಿಧ ಜನರನ್ನು ಪ್ರತಿಬಿಂಬಿಸುವ ಕಟೌಟ್‌ಗಳ ಒಂದು ಸೆಟ್, ಒಂದು ಥರ್ಮೋಕೋಲ್ ಹಾಳೆ, ಜಮಖಾನ.

ವಿಧಾನ :

*ಹಂತ 1 :* ಜಮಖಾನದ ಮೇಲೆ ವೃತ್ತಾಕಾರದಲ್ಲಿ ಕುಳಿತುಕೊಳ್ಳಲು ತರಬೇತುದಾರ ಶಿಬಿರಾರ್ಥಿಗಳಿಗೆ ಹೇಳಬೇಕು.

*ಹಂತ 2 :* ತರಬೇತಿದಾರರು ಗುಂಪಿಗೆ ಥರ್ಮೋಕೋಲ್ ಶೀಟ್ ಮತ್ತು ಕಟೌಟ್‌ಗಳನ್ನು ನೀಡಬೇಕು.

*ಹಂತ 3 :* ಪ್ರತಿ ಮಾದರಿಗೂ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು ಇತ್ಯಾದಿ ಹೆಸರುಗಳನ್ನು ನೀಡಬೇಕು.

*ಹಂತ 4 :* ಒಂದು ಗ್ರಾಮಸಭೆಯ ಮಾದರಿಗಳನ್ನು ಜೋಡಿಸುವಂತೆ ಶಿಬಿರಾರ್ಥಿಗಳಿಗೆ ಸೂಚಿಸಬೇಕು.

*ಹಂತ 5 :* ಮಾದರಿಗಳನ್ನು ಜೋಡಿಸುವಾಗ ತರಬೇತಿದಾರರು ಅದನ್ನು ಗಮನಿಸಬೇಕು. ಎಲ್ಲರೂ ಭಾಗವಹಿಸುವಂತೆ ಉತ್ತೇಜಿಸಬೇಕು.

*ಹಂತ 6 :* ಜೋಡಣೆ ಮುಗಿದ ಬಳಿಕ, ಅದನ್ನು ವಿವರಿಸುವಂತೆ ಯಾರಾದರೂ ಒಬ್ಬ ಶಿಬಿರಾರ್ಥಿಗೆ ಹೇಳಬೇಕು.

(ಚುನಾಯಿತ ಮಹಿಳಾ ಪ್ರತಿನಿಧಿಗಳು ತಮ್ಮ ಹಳ್ಳಿಯಲ್ಲಿ ಗ್ರಾಮಸಭೆ ನಡೆಯುವ ರೀತಿಯಲ್ಲಿ ತಾವು ಕಂಡಂತೆ ಮಾಡೆಲ್‌ಗಳನ್ನು ಜೋಡಿಸಿರುತ್ತಾರೆ)



**ತರಬೇತಿದಾರರ ವೀಕ್ಷಣೆ :**

- ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿ ಮತ್ತು ಗ್ರಾಮದ ಇತರ ಮುಖಂಡರು ಎತ್ತರದ ಕಟ್ಟೆಯಲ್ಲಿ ಕುಳಿತುಕೊಂಡಿರುವಂತೆ ಜೋಡಿಸಿದ್ದರು.
- ಪುರುಷರು ಮುಂದಿನ ಸಾಲಲ್ಲಿ ಕುಳಿತಿದ್ದರು.
- ಕೆಲವೇ ಮಹಿಳಾ ಸದಸ್ಯರು ಕಾಣುತಿದ್ದರು.
- ಮಹಿಳೆಯರು ಹಿಂದಿನ ಸಾಲಿನಲ್ಲಿ ಕುಳಿತಿದ್ದರು.
- ಪ.ಜಾತಿ/ಪಂಗಡದವರ ಮೂಲೆಯಲ್ಲಿ ಕುಳಿತಿದ್ದರು.

**ತರಬೇತುದಾರರ ಪಾತ್ರ :** ವೀಕ್ಷಣೆಯನ್ನು ಆಧರಿಸಿ ಶಿಬಿರಾರ್ಥಿಗಳಿಗೆ ಕೆಳಗಿನಂತೆ ಪ್ರಶ್ನೆಗಳನ್ನು ಕೇಳಬಹುದು.

- ಗ್ರಾಮಸಭೆಯಲ್ಲಿ ಯಾರ್‍ಯಾರು ಭಾಗವಹಿಸುತ್ತಾರೆ?
- ಕೆಲವೇ ಮಹಿಳೆಯರು ಇರುತ್ತಾರೆ, ಅಥವಾ ಮಹಿಳೆಯರೇ ಇರುವುದಿಲ್ಲ ಏಕೆ?
- ಪುರುಷರು ಯಾಕೆ ಮುಂದಿನ ಸಾಲಲ್ಲಿ ಕುಳಿತಿರುತ್ತಾರೆ?
- ಪ.ಜಾತಿ/ಪಂಗಡದ ಮೂಲೆಯಲ್ಲಿ ಕುಳಿತಿರುವುದೇಕೆ?
- ಎಷ್ಟು ದಿನಕ್ಕೊಮ್ಮೆ ಗ್ರಾಮಸಭೆ ಸಭೆ ಸೇರುತ್ತದೆ?
- ಗ್ರಾಮಸಭೆಯನ್ನು ಯಾರು ಕರೆಯುತ್ತಾರೆ.

ಪ್ರತಿಯೊಬ್ಬ ಸದಸ್ಯರು ಚರ್ಚೆಯಲ್ಲಿ ಪಾಲ್ಗೊಳ್ಳುವಂತೆ ನೋಡಿಕೊಳ್ಳಬೇಕು. ಉತ್ತರ ಪಡೆದ ಬಳಿಕ ಅದನ್ನು ವಿವರಿಸಿ, ತಪ್ಪಿದ್ದರೆ ತಿದ್ದಬೇಕು. ಗ್ರಾಮಸಭೆ ಕಾನೂನುಬದ್ಧವಾಗಿ ಯಾವ ರೀತಿ ನಡೆಯಬೇಕು ಎನ್ನುವುದನ್ನು ಸದಸ್ಯರಿಗೆ ವಿವರಿಸಬೇಕು.

**ಫಲಿತಾಂಶ :** ಗ್ರಾಮಸಭೆ ಯಾವ ರೀತಿ ನಡೆಯಬೇಕು, ಯಾರ್‍ಯಾರು ಪಾಲ್ಗೊಳ್ಳುತ್ತಾರೆ. ಎಷ್ಟು ಅವಧಿಗೊಮ್ಮೆ ಸಭೆ ನಡೆಸಬೇಕು. ಸಭೆ ಕರೆಯಬೇಕಾದವರು ಯಾರು, ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿ ಮತ್ತು ಇತರ ಸಿಬ್ಬಂದಿಯ ಕಾರ್ಯಗಳು ಮತ್ತು ಜವಾಬ್ದಾರಿಗಳೇನು - ಇವೆಲ್ಲವನ್ನೂ ಚುನಾಯಿತ ಮಹಿಳಾ ಪ್ರತಿನಿಧಿಗಳು ಮನದಟ್ಟು ಮಾಡಿಕೊಳ್ಳುತ್ತಾರೆ.

**ಟಿಪ್ಪಣಿಗೆ ಜಾಗ**



# ಪಾತ್ರಾಭಿನಯ

ತರಬೇತಿ ಕಾರ್ಯಕ್ರಮಗಳು ಮತ್ತು ಕಾರ್ಯಾಗಾರಗಳಲ್ಲಿ ಬಳಸುವ ಒಂದು ಪರಿಣಾಮಕಾರಿ ವಿಧಾನವೆಂದರೆ 'ಪಾತ್ರಾಭಿನಯ'. ಇದರಲ್ಲಿ ತನ್ನ ಜೊತೆಯವರ ಎದುರಿನಲ್ಲಿ ಮಾವವ ಸಂಬಂಧಗಳು ಮತ್ತು ಮಾನವ ಸಂವಾದದಲ್ಲಿನ ಸಮಸ್ಯೆಗಳ ಕುರಿತು ಅಭಿನಯಿಸುತ್ತಾರೆ. ಈ ಕ್ರಿಯೆ ನಂತರ ವೀಕ್ಷಕರು ಮತ್ತು ಪಾತ್ರಧಾರಿಗಳ ನಡುವೆ ಟೀಕೆ-ಟಿಪ್ಪಣಿಗಳ ಸಹಿತ ಪರಾಮರ್ಶೆಗೆ ಬಿಡಬೇಕು.

ಪಾತ್ರಾಭಿನಯದಲ್ಲಿ ನಿಜಜೀವನಕ್ಕೆ ಸಮೀಪವಿರುವ ಘಟನಾವಳಿಗಳನ್ನು ನಿರ್ವಹಿಸುವುದರಿಂದ ಪಾತ್ರಗಳ ಆಳವಾದ ಶೋಧನೆ ನಡೆಯುತ್ತದೆ. ಪಾತ್ರಗಳ ಶೋಧನೆ ಕೆಲದೂರದಿಂದ ನಡೆಯುವುದರಿಂದ, ಪಾತ್ರಧಾರಿಗಳು ಭೀತಿಗೊಳಗಾಗುವುದಿಲ್ಲ. ಇದು ಕಲಿಕೆಗೆ ಅನುವು ಮಾಡಿಕೊಡುತ್ತದೆ.

ಮಹಿಳೆಯರು ತಮ್ಮ ನಿಜಜೀವನದಲ್ಲಿ ಅನುಭವಿಸದ ಘಟನೆಗಳ ಬಗ್ಗೆ ಪಾತ್ರಾಭಿನಯಗಳಿಂದ ಅನುಭವ ಪಡೆದುಕೊಳ್ಳುತ್ತಾರೆ.

ಪಂಚಾಯತಿ ಪ್ರತಿನಿಧಿಗಳಾಗಿ ತಮಗೆ ಎದುರಾಗುವ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಪಾತ್ರಾಭಿನಯದ ಮೂಲಕ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಇದಕ್ಕಾಗಿ ಮೊದಲು ಸೂಕ್ತ ವಿಷಯ ಇಲ್ಲವೇ ಸಮಸ್ಯೆಯನ್ನು ಆರಿಸಬೇಕು. ಅನಂತರ ಕಲಿಕೆಗೆ ಬಂದ ಶಿಬಿರಾರ್ಥಿಗಳಿಗೆ ವಿಭಿನ್ನ ಪಾತ್ರಗಳನ್ನು ನೀಡಬೇಕು. ತಯಾರಿಗೆ ಅರ್ಧಗಂಟೆ ಕಾಲಾವಕಾಶ ನೀಡಬೇಕು.



*ವಿಷಯ :* ಗ್ರಾಮ ಪಂಚಾಯತಿ : ವಿವಿಧ ಇಲಾಖೆಗಳೊಂದಿಗೆ ಅದರ ಸಂಬಂಧ.

*ಉದ್ದೇಶ :* ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳಲು ವಿವಿಧ ಇಲಾಖೆಗಳ ಜತೆ ವ್ಯವಹರಿಸುವ ಕುರಿತು ಮಹಿಳಾ ಪ್ರತಿನಿಧಿಗಳು ಹಾಗೂ ಗ್ರಾಮಸ್ಥರಿಗೆ ಅರಿವು ಮೂಡಿಸುವುದು.

*ಗುಂಪಿನ ಗಾತ್ರ :* 40-50 ಮಂದಿ

*ಸಮಯ :* 45 ನಿಮಿಷ

*ಸಂಪನ್ಮೂಲ ವ್ಯಕ್ತಿ :* ಒಬ್ಬ ಅನುಭವಿ ತರಬೇತುದಾರರು.

*ಅಗತ್ಯ ಸ್ಥಳ :* ಒಂದು ದೊಡ್ಡ ಹಾಲ್

*ಅಗತ್ಯ ವಸ್ತುಗಳು :* ಒಂದು ಗಡಿಯಾರ, ವಿವಿಧ ಇಲಾಖೆಗಳ ಹೆಸರುಗಳಿರುವ ಕಾರ್ಡ್‌ಗಳು

ಕಾರ್ಯ-ವಿಧಾನ :

*ಹಂತ 1 :* 5-6 ಮಂದಿಗೆ ಹೊರಮುಖ ಮಾಡಿ ವೃತ್ತಾಕಾರದಲ್ಲಿ ಕುಳಿತುಕೊಳ್ಳಲು ಹೇಳಬೇಕು.

*ಹಂತ 2 :* 38 ಮಂದಿಯನ್ನು ಆಯ್ಕೆಮಾಡಿ ಅವರಿಗೆ ವಿವಿಧ ಸರಕಾರಿ ಅಧಿಕಾರಿಗಳ ಪಾತ್ರ ನೀಡುವುದು ಅಂದರೆ ಚುನಾಯಿತ ಮಹಿಳಾ ಪ್ರತಿನಿಧಿಗಳು ಸಾಮಾನ್ಯವಾಗಿ ವ್ಯವಹರಿಸಬೇಕಾದ 38 ಇಲಾಖೆಗಳನ್ನು ಈ ಪಾತ್ರಧಾರಿ ಅಧಿಕಾರಿಗಳು ಪ್ರತಿನಿಧಿಸಲಿ. ಅವರು ಸ್ವಲ್ಪ ದೊಡ್ಡ ವೃತ್ತಾಕಾರದಲ್ಲಿ ಕುಳಿತಿರಲಿ.

***ಹಂತ 3 :*** ಉಳಿದವರು ವಿವಿಧ ಸಮಸ್ಯೆಗಳಿರುವ ಸಾರ್ವಜನಿಕರಂತೆ ವ್ಯವಹರಿಸಲಿ.

***ಹಂತ 4 :*** ತರಬೇತುದಾರರು ಅಧಿಕಾರಿಗಳ ಮುಂದೆ ಅವರು ಪ್ರತಿನಿಧಿಸುವ (ಪಿ.ಡಬ್ಲ್ಯು.ಡಿ. ಬ್ಲಾಕ್ ಕೆ.ಇ.ಬಿ. - ಇತ್ಯಾದಿ) ಇಲಾಖೆಗಳ ಹೆಸರಿರುವ ಫಲಕವನ್ನು ಇಡಬೇಕು.

***ಹಂತ 5 :*** ಸಾರ್ವಜನಿಕರ ಪಾತ್ರಗಳನ್ನು ಪ್ರತಿನಿಧಿಸುವವರು ತಮ್ಮ ವಿವಿಧ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಚುನಾಯಿತ ಪ್ರತಿನಿಧಿಯನ್ನು ಭೇಟಿ ಮಾಡಲಿ. ಅವರು ಸಂಬಂಧಿತ ಇಲಾಖಾಧಿಕಾರಿ ಪಾತ್ರಧಾರಿ ಬಳಿ ಕರೆದೊಯ್ಯಲಿ. ಇಲಾಖೆಯ ಚಿತ್ರ ಪಟದ ಸಹಾಯದಿಂದ ಚುನಾಯಿತ ಪ್ರತಿನಿಧಿ ಇವರನ್ನು ಗುರ್ತಿಸಬಹುದು.

***ಹಂತ 6 :*** ನಿರ್ದಿಷ್ಟ ಸಮಸ್ಯೆ ನಿವಾರಣೆಗೆ ಸಂಬಂಧಿತ ಇಲಾಖೆಯನ್ನು ಸಂಪರ್ಕಿಸಲಿ. ಈ ಪ್ರಕ್ರಿಯೆಯಿಂದ ವಿವಿಧ ಸರಕಾರಿ ಇಲಾಖೆಗಳು ಮತ್ತು ಅಧಿಕಾರಿಗಳ ಕಾರ್ಯವೈಖರಿ ಶಿಬಿರಾರ್ಥಿಗಳಿಗೆ ಗೊತ್ತಾಗುತ್ತದೆ.

***ಹಂತ 7 :*** ತರಬೇತುದಾರ ನಂತರ ಐ.ಎಸ್.ಎಸ್.ಟಿ. ತಯಾರಿಸಿರುವ ಡಿಪಾರ್ಟ್‌ಮೆಂಟಲ್ ಗಡಿಯಾರ ಬಳಸಿ ಇದೆ ಕಾರ್ಯಗಳನ್ನು ಪುನರ್ ಮನನ ಮಾಡಿಸಲು ಎಲ್ಲ ಇಲಾಖೆಗಳ ಪರಿಚಯ ಮಾಡಿಸಬೇಕು.

**ತರಬೇತುದಾರರ ವೀಕ್ಷಣೆ :**

- ಶಿಬಿರಾರ್ಥಿಗಳು ಯಾವ ರೀತಿ ಇಲಾಖೆಗಳೊಡನೆ ವ್ಯವಹರಿಸುತ್ತಾರೆ, ಎಷ್ಟು ಇಲಾಖೆಗಳ ಬಗ್ಗೆ ಅರಿವಿದೆ ಎಂಬುದನ್ನು ಗಮನಿಬೇಕು.
- ಎಷ್ಟು ಇಲಾಖೆಗಳೊಂದಿಗೆ ಅವುಗಳ ಅಧಿಕಾರಿಗಳೊಂದಿಗೆ ಆಕೆ ಹೇಗೆ ವ್ಯವಹರಿಸುತ್ತಾಳೆ ಎಂಬುದನ್ನು ಗಮನಿಸಬೇಕು.

**ತರಬೇತುದಾರರ ಪಾತ್ರ :**

- ವಿವಿಧ ಇಲಾಖೆ ಮತ್ತು ಅಧಿಕಾರಿಗಳೊಂದಿಗೆ ಹೇಗೆ ವ್ಯವಹರಿಸ ಬೇಕೆಂದು ಕಲಿಸಬೇಕು.
- ದೃಢವಾಗಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ವಿಧಾನ ಕಲಿಸಬೇಕು.
- ಅಭಿಪ್ರಾಯ ವಿನಿಮಯ ಮತ್ತು ವಿಶ್ಲೇಷಣೆಗೆ ಅವಕಾಶ ಕಲ್ಪಿಸುವುದು.
- ಇಲ್ಲಿ ಚರ್ಚೆ ಸಲಹೆ ಕುರಿತು ನಡೆಯಬಾರದು. ಬದಲಿಗೆ ವೀಕ್ಷಣೆ, ಭಾವನೆ ಮತ್ತು ಅರ್ಥೈಸುವಿಕೆ ಕುರಿತಂತೆ ನಡೆಯಬೇಕು.
- ವಿಶ್ಲೇಷಣೆಯ ಗುರಿ ವ್ಯಕ್ತಿ ಇಲ್ಲವೇ ಪಾತ್ರಾಭಿನಯದಲ್ಲಿ ಆತನ ಸಾಮರ್ಥ್ಯ ಆಗಿರದೆ, ಪಾತ್ರಾಭಿನಯಕ್ಕೆ ಆಯ್ದುಕೊಂಡ ಸಮಸ್ಯೆ ಆಗಿರಬೇಕು.
- ಇದರ ಬದಲು ಇದೇ ಸನ್ನಿವೇಶವನ್ನು ವಿವಿಧ ಗುಂಪುಗಳು ನಿರ್ವಹಿಸಲಿ. ಇದರಿಂದ ಒಂದು ಸಮಸ್ಯೆಯನ್ನು ಬಗಹರಿಸುವ ವಿವಿಧ ಪರಿಹಾರಗಳು ಬೆಳಕಿಗೆ ಬರುತ್ತವೆ.
- ಫಲಿತಾಂಶ ಶಿಬಿರಾರ್ಥಿಗಳು ಸ್ವತಃ ಪಾಲ್ಗೊಳ್ಳುವುದರಿಂದ ತಾವು ವ್ಯವಹರಿಸಬೇಕಾದ ಇಲಾಖೆಗಳ ವಿವರ ಅವರಿಗೆ ಮನದಟ್ಟಾಗುತ್ತದೆ. ಈ ಅನುಭವಗಳೊಂದಿಗೆ ಪಂಚಾಯತಿ ಚಟುವಟಿಕೆಗಳನ್ನು ಅವರು ಹೆಚ್ಚು ಸಮರ್ಥವಾಗಿ ನಿಭಾಯಿಸಬಹುದು.



# ವ್ಯಕ್ತಿ ಅಧ್ಯಯನ (ಕೇಸ್ ಸ್ಟಡಿ)



ಗುಂಪೊಂದರಲ್ಲಿ ಕೆಲವು ಮಹಿಳೆಯರು ಅತ್ಯುತ್ತಮ ಹಾಗೂ ಸಮರ್ಥ ನಾಯಕತ್ವ ಗುಣ ಹೊಂದಿರುತ್ತಾರೆ. ಅಂಥವರು ತಮ್ಮ ಅಧಿಕಾರವನ್ನು ಸಮರ್ಥವಾಗಿ ಸ್ಥಾಪಿಸಿಕೊಳ್ಳುತ್ತಾರೆ. ತರಬೇತುದಾರರು ಅಂತಹ ಅಧ್ಯಯನಗಳನ್ನು ಸಂಗ್ರಹಿಸಿ ಶಿಬಿರಾರ್ಥಿ ಗುಂಪುಗಳಿಗೆ ವಿವರಿಸಬೇಕು. 'ದೃಷ್ಟಾಂತ ಅಧ್ಯಯನದಲ್ಲಿ ನೆರವೀಯಬಲ್ಲ ಒಬ್ಬ ವ್ಯಕ್ತಿಯನ್ನು ಆಯ್ದುಕೊಂಡು ಅಧ್ಯಯನ ಮಾಡಲಾಗುತ್ತದೆ.

ಎಲ್ಲ ಶಿಬಿರಾರ್ಥಿಗಳ ಸ್ವಯಂಪ್ರೇರಣೆಯಿಂದ ಇದರಲ್ಲಿ ಪಾಲ್ಗೊಳ್ಳುತ್ತಾರೆ. ಆದ್ದರಿಂದ ಅವರ ಪ್ರತಿಕ್ರಿಯೆ ಕೂಡಾ ತನ್ನಿಂತಾನೇ ಹೊರಹೊಮ್ಮುತ್ತದೆ. ಪ್ರಮುಖ ಸಾಮಾಜಿಕ ಸಮಸ್ಯೆಗಳು, ಬಹಿರಂಗವಾಗಿ ಚರ್ಚಿಸಬಹುದಾದ ಸಂಗತಿಗಳನ್ನು ವ್ಯಕ್ತಿ ಅಧ್ಯಯನ ವಿಧಾನದಲ್ಲಿ ವಿಶ್ಲೇಷಿಸಲಾಗುತ್ತದೆ. ಒಂದೇ ಬಗೆಯ ಸಮಸ್ಯೆಗಳನ್ನು ಎದುರಿಸಿದಾಗ ಇರಬಹುದಾದ ವಿವಿಧ ಪರಿಹಾರಗಳನ್ನು ಕಂಡುಹಿಡಿಯುವಲ್ಲಿ ಈ ವಿಧಾನ ನೆರವಾಗುತ್ತದೆ. ಜನಜಾಗೃತಿ ಮೂಡಿಸಲು ಮತ್ತು ಇತರರ ಅನುಭವಗಳಿಂದ ಸಮಸ್ಯೆಗಳನ್ನು ಎದುರಿಸುವ ಮತ್ತು ಪರಿಹರಿಸುವ ಕೌಶಲ್ಯ ಬೆಳೆಸುವಲ್ಲಿ ಇದು ಸಹಾಯಕ. ಬೇರೆಯವರೊಂದಿಗೆ ಸಕಾರಾತ್ಮಕ (ಯಶಸ್ವಿನ) ಅನುಭವಗಳನ್ನು ಹಂಚಿಕೊಳ್ಳುವುದರಿಂದ ವ್ಯಕ್ತಿಯ ಆತ್ಮವಿಶ್ವಾಸ ಹೆಚ್ಚುತ್ತದೆ, ತಮ್ಮ ಕೆಲಸ ಮತ್ತು ಹೋರಾಟದಲ್ಲಿ ಹೊಸ ಹುರುಪು ಮೂಡುತ್ತದೆ.

ಸಮರ್ಪಕ ಮತ್ತು ಸೂಕ್ತ ದೃಷ್ಟಾಂತ ಅಧ್ಯಯನದ ಲಭ್ಯತೆ ಕ್ಲಿಷ್ಟ ಮತ್ತು ಸಂಬಂಧಿತ ಮಾಹಿತಿ ಸಂಗ್ರಹಣೆಗೆ ಬಹಳ ಕಾಲಾಕಾಶ ಹಿಡಿಯುತ್ತದೆ. ತರಬೇತುದಾರರು ಸಾಕಷ್ಟು ಚುರುಕಾಗಿ ಪ್ರಶ್ನೆಗಳನ್ನು ಕೇಳುತ್ತ ಮಾಹಿತಿ ಕಲೆಹಾಕಲು ಮತ್ತು ಗೊಂದಲಗಳನ್ನು ನಿವಾರಿಸಲು ವಾಸ್ತವದೊಂದಿಗೆ ಸಮನ್ವಯಿಸಲು ಶಕ್ತರಾಗಿರಬೇಕು. ಗ್ರಾಮ ಪಂಚಾಯತಿಗಳಲ್ಲಿ, ಗ್ರಾಮಪಂಚಾಯತಿ ಸಭೆಗಳು, ಮಹಿಳೆಯರ ಮಹತ್ವ, ಗ್ರಾಮಸಭೆ ವಿಕೇಂದ್ರಿಕರಣ, ಸಂಪರ್ಕ ಕೌಶಲ್ಯಗಳು, ನಾಯಕತ್ವ ಗುಣ - ಇತ್ಯಾದಿಗಳ ಬಗ್ಗೆ ಸಮರ್ಥವಾಗಿ ಮಾಹಿತಿ ನೀಡಲು ಅಧ್ಯಯನಗಳ ಪರಿಣಾಮಕಾರಿಯಾಗಿ ನೆರವೀಯಬಲ್ಲವು. ಇದನ್ನು ಉದಾಹರಣೆಯೊಂದಿಗೆ ವಿವರಿಸಬಹುದು.

*ವಿಷಯ :* ಮಹಿಳೆಯರಿಗೆ ತಿಳಿಯುವ ಹಕ್ಕು ಇಲ್ಲವೇ?

*ಉದ್ದೇಶ :* ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಸಮಾಜದಲ್ಲಿ ಪ್ರಸ್ತುತ ಇರುವ ಲಿಂಗಭೇದ ನೀತಿ ಬಗ್ಗೆ ಅರಿವು ಮೂಡಿಸುವುದು.

*ಗುಂಪಿನ ಗಾತ್ರ :* 20-25 ಜನ

*ಸಮಯ :* 30-45 ನಿಮಿಷ

*ಸಂಪನ್ಮೂಲ ವ್ಯಕ್ತಿ :* ಒಬ್ಬ ಅನುಭವೀ ತರಬೇತುದಾರರು,

*ಅಗತ್ಯ ಸ್ಥಳ :* ಒಂದು ದೊಡ್ಡ ಕೊಠಡಿ

*ಅಗತ್ಯ ಸಲಕರಣೆಗಳು :* ಏನು ಬೇಡ

ವಿಧಾನ : *ಹಂತ 1 :* ತರಬೇತುದಾರರು ಅರ್ಧ ವೃತ್ತಾಕಾರದಲ್ಲಿ ಶಿಬಿರಾರ್ಥಿಗಳನ್ನು ಕುಳಿತುಕೊಳ್ಳುವಂತೆ ಹೇಳಬೇಕು.

*ಹಂತ 2 :* ತರಬೇತದಾರರು ಮಧ್ಯದಲ್ಲಿ ಎಲ್ಲರಿಗೂ ಕಾಣುವಂತೆ ನಿಲ್ಲಬೇಕು.

*ಹಂತ 3 :* ಗ್ರಾ.ಪಂ. ಸದಸ್ಯೆ ಗೌರಮ್ಮನ ಕತೆಯನ್ನು ಆರಂಭಿಸಬೇಕು.

"ಗೌರಮ್ಮ ಮೊದಲ ಬಾರಿಗೆ ಗ್ರಾಮ ಪಂಚಾಯತಿ ಸದಸ್ಯೆಯಾದಳು. ಹಳ್ಳಿಯ ಬಡ ಮಹಿಳೆಯರು ಕಷ್ಟಕ್ಕೆ ಕರಗಿಹೋದ ಆಕೆ, ತನ್ನ ಹಳ್ಳಿಯ ಮಹಿಳೆಯರಿಗಾಗಿ ಕೆಲಸ ಮಾಡುವ ಉದ್ದೇಶ ಹೊಂದಿದ್ದಾಳೆ. ಅವರ ಹಕ್ಕು ಅವರಿಗೆ ಕೊಡಿಸಲು ನಿಶ್ಚಯಿಸಿದ್ದಾಳೆ. ಮಹಿಳೆಯರ ಆರ್ಥಿಕ ಸ್ಥಿತಿಗತಿ, ಸುಧಾರಣೆಗೆ ನೆರವಾಗುವ ಹಲವು ಯೋಜನೆಗಳಿವೆ ಎಂದು ಆಕೆಗೆ ಗೊತ್ತಾಗಿದೆ. ಆ ಕುರಿತು ಹೆಚ್ಚಿನ ವಿವರ ಪಡೆಯಲು ಬಯಸುತ್ತಾಳೆ.




ಆಕೆ ಪಂಚಾಯತಿ ಸಭೆಯಲ್ಲಿ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯದರ್ಶಿ ಮತ್ತು ಇತರ ಸದಸ್ಯರಿಂದ ಮಾಹಿತಿ ಪಡೆಯಲು ಪ್ರಯತ್ನಿಸಿ ವಿಫಲಗೊಳ್ಳುತ್ತಾಳೆ. 'ನೀನು ಈಗಷ್ಟೇ ಪಂಚಾಯತಿ ಪ್ರವೇಶಿಸಿದ್ದೀ ಆಗಲೇ ಇಷ್ಟೊಂದು ಮಾತಾಡುತ್ತಿದ್ದೀ, ಅದನ್ನು ನಮಗೆ ಬಿಡು. ನಮಗೆ ಹೆಚ್ಚು ಅನುಭವವಿದೆ ಎಂದು ವಾದಿಸಿ ಇತರರು ಗೌರಮ್ಮನ ಬಾಯಿ ಮುಚ್ಚಿಸುತ್ತಾರೆ.

ದೊರೆತ ಉತ್ತರಗಳಿಂದ ತೃಪ್ತಳಾಗದ ಆಕೆ ಬಿಡಿಓರವರನ್ನು (ಬ್ಲಾಕ್ ಡೆವಲಪ್‌ಮೆಂಟ್ ಆಫೀಸರ್) ಭೇಟಿಯಾಗಲು ನಿರ್ಧರಿಸುತ್ತಾಳೆ. ಆದರೆ ಅಲ್ಲಿ ಆಕೆಗಾಗುವ ಅನುಭವ ಇನ್ನೂ ಕೆಟ್ಟದಾಗಿರುತ್ತದೆ. ಆ ಅಧಿಕಾರಿ ತುಂಬಾ ಒರಟ. ಕೋಪಗೊಂಡ ಗೌರಮ್ಮ ಮೇಲಿನ ಅಧಿಕಾರಿಗೆ ದೂರು ನೀಡುವುದಾಗಿ ಬೆದರಿಕೆ ಹಾಕುತ್ತಾಳೆ. ಆಗ ನೀನು ಡಿಸಿ (ಜಿಲ್ಲಾಧಿಕಾರಿ) ವಿಧಾನಸೌಧ ಅಥವಾ ದಿಲ್ಲಿಗೆ ಬೇಕಾದರೂ ಹೋಗು, ನಾನು ಹೆದರುವುದಿಲ್ಲ" ಎಂದು ಅಧಿಕಾರಿ ಉತ್ತರಿಸುತ್ತಾರೆ.

ಪಂಚಾಯತಿಯ ಪುರುಷ ಸದಸ್ಯರ ಮತ್ತು ಬಿಡಿಓ ಅವರ ಅಸಹಕಾರ ಧೋರಣೆಯ ಬಗ್ಗೆ ತನ್ನ ಹಳ್ಳಿಗೆ ಭೇಟಿ ನೀಡಿದ್ದ ಜಿಲ್ಲಾ ಪಂಚಾಯತಿ ಉಪಾಧ್ಯಕ್ಷೆಯ ಬಳಿ ಹೇಳಿಕೊಳ್ಳುತ್ತಾಳೆ.

ಕೋಪಗೊಂಡ ಉಪಾಧ್ಯಕ್ಷೆ ತಕ್ಷಣವೇ ಬಿಡಿಓರನ್ನು ಕರೆದು ಸರಿಯಾಗಿ ಕರ್ತವ್ಯ ನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತಾರೆ. "ಮಹಿಳೆಯರನ್ನು ಕಡೆಗಣಿಸಬೇಡಿ, ಈಕೆ ಒಬ್ಬ ಪಂಚಾಯತಿ ಸದಸ್ಯೆ. ಪಂಚಾಯತಿ ಸದಸ್ಯರೊಂದಿಗೆ ಸಹಕರಿಸುವುದೇ ನಿಮ್ಮ ಕರ್ತವ್ಯ" ಎಂದು ಕಟುವಾಗಿ ತಿಳಿಸುತ್ತಾರೆ.

ಅಂದಿನಿಂದ ಅಧಿಕಾರಿಗಳ ವರ್ತನೆ ಬದಲಾಗಿ ಚೆನ್ನಾಗಿ ಸಹಕರಿಸುವುದನ್ನು ಗೌರಮ್ಮ ಕಾಣುತ್ತಾಳೆ. ಇದು ಆಕೆ ತನ್ನ ಕರ್ತವ್ಯಪಾಲನೆಯನ್ನು ಯಶಸ್ವಿಯಾಗಿ ಮಾಡುವಲ್ಲಿ ನೆರವಾಗುತ್ತದೆ.

***ಹಂತ 4 :*** ಗುಂಪಿನೊಂದಿಗೆ ವಿಷಯದ ಮೇಲೆ ಚರ್ಚೆ

**ತರಬೇತುದಾರರ ಪಾತ್ರ :** ತರಬೇತಿದಾರ/ಳು ಇತರರೊಂದಿಗೆ ಚರ್ಚಿಸುವ ಮೂಲಕ, ಪ್ರಶ್ನೆ ಕೇಳುವ ಅಭ್ಯಾಸ ಬೆಳೆಸಿಕೊಳ್ಳುವ ಮೂಲಕ ಮತ್ತು ಹೊಸದನ್ನು ಕಲಿಯುವ ಉತ್ಸಾಹ ಪ್ರದರ್ಶಿಸುವ ಮೂಲಕ ಮಾಹಿತಿ ಪಡೆಯಲು ಸಾಧ್ಯ ಎಂಬುದನ್ನು ಶಿಬಿರಾರ್ಥಿಗಳಿಗೆ ಮನದಟ್ಟು ಮಾಡಿಸಬೇಕು. ಸಾಮಾಜಿಕವಾಗಿ ಕಡೆಗಣಿಸಲ್ಪಟ್ಟವರ ಧ್ವನಿ ಹೇಗೆ ಕ್ಷೀಣವಾಗಿದೆ, ಶೋಷಕ ಸಮಾಜದಲ್ಲಿ ಅವರು ಹೇಗೆ ಬದಿಗೊತ್ತಲ್ಪಟ್ಟಿದ್ದಾರೆ ಎಂಬುದನ್ನು ತರಬೇತುದಾರರು ಮನವರಿಕೆ ಮಾಡಿಸಬೇಕು. ಮಹಿಳೆಯರು, ಅದರಲ್ಲೂ ಹೆಚ್ಚು ಶೋಷಣೆಗೆ ಗುರಿಯಾಗುವ ಬಡ ಮಹಿಳೆಯರಿಗೆ ಪಂಚಾಯತಿಗಳು ಹೇಗೆ, ನ್ಯಾಯ ದೊರಕಿಸಿಕೊಳ್ಳುವಲ್ಲಿ ನೆರವಾಗಬಲ್ಲವು, ಬಡವರ ಹಾಗೂ ಬದಿಗೊತ್ತಲ್ಪಟ್ಟವರ ಹೆಸರಿನಲ್ಲಿ ಬರುವ ಸಂಪನ್ಮೂಲಗಳಲ್ಲಿ ಹೇಗೆ ಪಾಲು ಪಡೆದುಕೊಳ್ಳಬೇಕೆಂದು ಈ ದೃಷ್ಟಾಂತ ಅಧ್ಯಯನದ ಮೂಲಕ ತಿಳಿಹೇಳಬಹುದು. ಭಾರತದ ಒಕ್ಕೂಟ ರಾಜಕೀಯ ವ್ಯವಸ್ಥೆ, ಪಂಚಾಯತಿ ರಾಜ್ ವ್ಯವಸ್ಥೆಯ ಮೂರು ಹಂತಗಳು ಮತ್ತು ಪಂಚಾಯತಿಗಳ ಹಣಕಾಸಿನ ಮೂಲಗಳ ಬಗ್ಗೆಯೂ ಪೂರಕ ಮಾಹಿತಿ ನೀಡಬೇಕು.

***ಫಲಿತಾಂಶ :*** ಮಹಿಳಾ ಸದಸ್ಯರ ಇಂತಹ ಯಶಸ್ವಿ ಕಥೆಗಳು ಇತರ ಮಹಿಳಾ ಜನಪ್ರತಿನಿಧಿಗಳ ಆತ್ಮವಿಶ್ವಾಸ ಹೆಚ್ಚಿಸುತ್ತವೆ. ತಮ್ಮ ಚಟುವಟಿಕೆಗಳನ್ನು ಸವಾಲುಗಳನ್ನು ಇನ್ನಷ್ಟು ಧೈರ್ಯದಿಂದ ನಿಭಾಯಿಸಲು ಈ ಅನುಭವಗಳು ನೆರವಾಗುತ್ತವೆ.

**ಟಿಪ್ಪಣಿಗೆ ಜಾಗ**



ದೊಡ್ಡ ಸಮೂಹವೊಂದಕ್ಕೆ ಯಾವುದೇ ಸಂದೇಶ ಅಥವಾ ಮಾಹಿತಿ ಪೂರೈಸಬೇಕಾದರೆ ಈ ವಿಧಾನ ಹೆಚ್ಚು ಉಪಯುಕ್ತ. ಶಿಬಿರಾರ್ಥಿಗಳ ಮನೆ ಮುಂದೆಯೇ ನಾಟಕ ಅಭಿನಯಿಸುವ ಮೂಲಕ ಇದನ್ನು ಮಾಡಬಹುದು. ಇದಕ್ಕೆ ವೇದಿಕೆ ಅಥವಾ ವೇಷಭೂಷಣ ಅಗತ್ಯವಿಲ್ಲ.

*ಉದ್ದೇಶ :* ಒಬ್ಬ ಮಹಿಳೆ ಪಂಚಾಯತಿ ಚುನಾವಣೆಯಲ್ಲಿ ಗೆದ್ದ ನಂತರ ಆಕೆಯನ್ನು ನೇಕವಾಗಿ ಇಲ್ಲವೇ ಹೇಗೆ ಪರೋಕ್ಷವಾಗಿ ಕೀಳಾಗಿ ಕಾಣಲಾಗುತ್ತಾರೆ. ಎಂಬುದನ್ನು ಬೀದಿನಾಟಕದ ಮೂಲಕ ತೋರಿಸುವುದು.

*ವಿಷಯ :* ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ.

*ಗಂಪಿನ ಗಾತ್ರ :* 5-10 ಮಂದಿ

*ಸಮಯ :* 45-60 ನಿಮಿಷಗಳು.

*ಸಂಪನ್ಮೂಲ ವ್ಯಕ್ತಿ :* ತರಬೇತಿದಾರ/ಅನುಭವಿ ತರಬೇತಿದಾರರ ತಂಡ

*ಸ್ಥಳ :* ಆಟದ ಮೈದಾನ ಅಥವಾ ಗ್ರಾಮದ ಜನ ಸೇರುವ ಜಾಗ

ವಿಧಾನ : ***ಹಂತ 1 :*** ಮೈದಾನದಲ್ಲಿ ಹಳ್ಳಿಯ ಜನರು ಸೇರುವಂತೆ ಮಾಡುವುದು.

***ಹಂತ 2 :*** ಹಳ್ಳಿಗರ ಗಮನ ಸೆಳೆಯಲು ತರಬೇತದಾರರು ಲಘು ಹಾಸ್ಯ ಪ್ರಸಂಗ ಪ್ರಾರಂಭಿಸುವುದು.

***ಹಂತ 3 :*** ನಂತರ ತಂಡ ನಿಜವಾದ ನಾಟಕ ಆರಂಭಿಸಬೇಕು. ಅದರಲ್ಲಿ ನಾಲ್ಕು ದೃಶ್ಯಗಳಿರಲಿ.

*ಮೊದಲ ದೃಶ್ಯದಲ್ಲಿ :* ಹಾರ ಹಾಕಿದ ವ್ಯಕ್ತಿಯೊಬ್ಬ ಮೆರವಣಿಗೆಯಲ್ಲಿ ಬರುತ್ತಾನೆ. ಹೊಗಳಿಕೆ ಘೋಷಣೆಯೊಂದಿಗೆ ಕೆಲವರು ಆತನನ್ನು ಹೊತ್ತು ತರುತ್ತಾರೆ. ಇತರರು (ಗ್ರಾಮಸ್ಥರು) ಅವರನ್ನು ಹಿಂಬಾಲಿಸುತ್ತಿದ್ದಾರೆ. ಮತ್ತೊಂದು ಕಡೆ ಇಬ್ಬರು ಮಹಿಳೆಯರು ಮಾತನಾಡಿಕೊಳ್ಳುತ್ತಿದ್ದಾರೆ.

*ಮೊದಲ ಮಹಿಳೆ :* ಈ ಮೆರವಣಿಗೆ ಏಕೆ ನಡೆಯುತ್ತಿದೆ?

*ಎರಡನೆ ಮಹಿಳೆ :* (ಮೆಲುದನಿಯಲ್ಲಿ) : "ಅವನು ರಾಮಪ್ಪ, ಇತ್ತೀಚೆಗೆ ಪಂಚಾಯತಿ ಚುನಾವಣೆಯಲ್ಲಿ ಗೆದ್ದ ಶಾಂತಮ್ಮನ ಗಂಡ."

*ಮೊದಲ ಮಹಿಳೆ :* "ಗೆದ್ದವಳು ಅವಳು. ಆದರೆ ಅವಳ ಗಂಡನಿಗೆ ಯಾಕೆ ಸನ್ಮಾನ?

*ಎರಡನೆ ಮಹಿಳೆ :* "ಈ ಸಮಾಜದಲ್ಲಿ ನಡೆಯುವುದೇ ಹೀಗೆ"

ಎರಡನೇ ದೃಶ್ಯದಲ್ಲಿ : ಪ್ರಥಮ ಪಂಚಾಯತಿ ಸಭೆ, ಸ್ಥಳ, ದಿನಾಂಕಗಳಿರುವ ಪತ್ರ ಹಿಡಿದುಕೊಂಡು ಶಾಂತಮ್ಮ ಹೊರಡಲು ಸಿದ್ಧತೆ ನಡೆಸಿದ್ದಾಳೆ.

*ರಾಮಪ್ಪ :* "ನೀನು ಎಲ್ಲಿಗೆ ಹೋಗುತ್ತಿದ್ದಿ?"

*ಶಾಂತಮ್ಮ :* "ಪಂಚಾಯತಿ ಸಭೆಗೆ"

*ರಾಮಪ್ಪ :* "ಅಲ್ಲೇನು ಮಾಡ್ತಿ? ಅಲ್ಲಿ ನಡೆಯುವುದು ನಿನಗೇನೂ ಗೊತ್ತಾಗುವುದಿಲ್ಲ. ನೀನು ಮನೆಕೆಲಸ ನೋಡಿಕೋ".

ಹೀಗೆ ಹೇಳುತ್ತಾ ರಾಮಪ್ಪ ತಾನೇ ಪಂಚಾಯತಿ ಕಚೇರಿಗೆ ಹೋಗುತ್ತಾನೆ.

*ಮೂರನೇ ದೃಶ್ಯದಲ್ಲಿ :* ಪಂಚಾಯತಿ ಮೀಟಿಂಗ್‌ನ 2ನೇ ನೋಟಿಸ್ ಬರುತ್ತದೆ. ರಾಮಪ್ಪ ಊರಲ್ಲಿರುವುದಿಲ್ಲ. ನೆರೆಯ ಗ್ರಾಮದ ಚುನಾಯಿತ ಮಹಿಳಾ ಸದಸ್ಯೆ ಪಂಚಾಯತಿ ಸಭೆಗೆ ಬರುವಂತೆ ಶಾಂತಮ್ಮನಿಗೆ ಒತ್ತಾಯಿಸುತ್ತಾಳೆ.

ಈ ಮಧ್ಯೆ, ರಾಮಪ್ಪ ಊರಿಗೆ ವಾಪಸಾಗುತ್ತಾನೆ. ಮನೆಯಲ್ಲಿ ಪತ್ನಿಯನ್ನು ಕಾಣದೆ ನೆರೆಮನೆಯಲ್ಲಿ ವಿಚಾರಿಸಿದಾಗ ಶಾಂತಮ್ಮ ಪಂಚಾಯತಿ ಸಭೆಗೆ ಹೋಗಿರುವುದು ಗೊತ್ತಾಗುತ್ತದೆ. ಆತ ಕೋಪದಿಂದ ಅಲ್ಲಿಗೆ ಧಾವಿಸುತ್ತಾನೆ.

*ನಾಲ್ಕನೇ ದೃಶ್ಯದಲ್ಲಿ :* ಪಂಚಾಯತಿ ಸಭೆ ನಡೆಯುತ್ತಿದೆ. ಎಲ್ಲರೂ ಚರ್ಚೆಯಲ್ಲಿ ಮಗ್ನರಾಗಿದ್ದಾರೆ. ರಾಮಪ್ಪ ಹಠಾತ್ತನೆ ಕಚೇರಿ ಪ್ರವೇಶಿಸಿ ಶಾಂತಮ್ಮನ ತಲೆಗೂದಲು ಹಿಡಿದು ಹೊರಗೆಳೆಯುತ್ತಾನೆ, ಬೈಯುತ್ತಾನೆ, ಹೊಡೆಯುತ್ತಾನೆ. ಅಲ್ಲಿದ್ದ ಇತರರು ಅಸಹಾಯಕರಾಗಿ ನೋಡುತ್ತಾನೆ.

**ತರಬೇತುದಾರರ ಪಾತ್ರ :** ಈ ಹಂತದಲ್ಲಿ ಮಧ್ಯಪ್ರವೇಶಿಸಿದ ತರಬೇತುದಾರ ಸಭಿಕರನ್ನು ಉದ್ದೇಶಿಸಿ "ಇಷ್ಟು ಹೊತ್ತು ನೀವು ಒಬ್ಬ ಮಹಿಳೆಯೊಡನೆ ಆಕೆಯ ಗಂಡ ಯಾವ ರೀತಿ ವರ್ತಿಸುತ್ತಾನೆ ಎಂಬುದನ್ನು ನೋಡಿದಿರಿ. ಹೆಚ್ಚಿನ ಮಹಿಳಾ ಸದಸ್ಯರ ಪಾಡೂ ಇದೇ", ಎನ್ನುತ್ತಾರೆ. "ನೀವು ಎಂದಾದರೂ ಇಂತಹ ಸಮಸ್ಯೆ ಎದುರಿಸಿದ್ದೀರಾ? ನೀವು ಹೇಗೆ ಇದನ್ನೆಲ್ಲ ಸಹಿಸಿಕೊಳ್ಳುವಿರಿ?" ಎಂದು ಪ್ರಶ್ನಿಸಬೇಕು. ಈ ಪ್ರಶ್ನೆ ಪ್ರೇಕ್ಷಕರಲ್ಲಿ ಚರ್ಚೆಗೆ ಅನುವು ಮಾಡಿಕೊಡುತ್ತದೆ.

*ಫಲಿತಾಂಶ :* ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ಹೋರಾಡಲು ಹಾಗೂ ತಮ್ಮನ್ನು ಬಲಗೊಳಿಸಿಕೊಳ್ಳಲು ಸ್ವತಃ ಮುಂದೆ ಬರದಿದ್ದರೆ ಪರಿಸ್ಥಿತಿ ಹೀಗೆಯೇ ಮುಂದುವರಿಯುತ್ತದೆ ಎಂಬುದನ್ನು ತರಬೇತುದಾರರು ಪ್ರೇಕ್ಷಕರಿಗೆ ಮನವರಿಕೆ ಮಾಡುತ್ತಾರೆ.

**ಟಿಪ್ಪಣಿಗೆ ಜಾಗ**



## ಕಥೆ *(Story)*

ತರಬೇತಿಗಳಲ್ಲಿ ಕಥೆ ಹೇಳುವ ವಿಧಾನವು ಬಹಳ ಪರಿಣಾಮಕಾರಿ ವಿಧಾನ. ಏಕೆಂದರ ಇದರಲ್ಲಿ ಕಥೆ ಹೇಳುವವ ಮತ್ತು ಕೇಳುವವರಿಬ್ಬರೂ ಮಾನಸಿಕ ಚಿತ್ರವೊಂದನ್ನು ಹೆಣೆಯುತ್ತಾರೆ. ಕಥೆಯೊಂದಕ್ಕೆ ಆರಂಭ ಹಾಗೂ ಅಂತ್ಯ ಇರುವುದರಿಂದ ಮತ್ತು ಅದರಲ್ಲಿ ನೀತಿಯೊಂದು ಅಡಗಿರುವುದರಿಂದ ಬಹುತೇಕ ಸ್ವಲ್ಪ ಅಕ್ಷರಸ್ಥರೇ ಆಗಿರುವ ಶಿಬಿರಾರ್ಥಿಗಳಿಗೆ ಕತೆ ಮೂಲಕ ಸಂದೇಶ ರವಾನಿಸಲು ನಿರೂಪಕನಿಗೆ ಸುಲಭ ಸಾಧ್ಯವಾಗುತ್ತದೆ. ಕಥೆಯೊಂದರಲ್ಲಿ ಪೂರ್ಣ ತಲ್ಲೀನನಾಗುವ ಶಿಬಿರಾರ್ಥಿಗಳು ತಾವು ಆ ಕಥೆಯ ಪಾತ್ರಧಾರಿಗಳೆಂದು ಭ್ರಮಿಸುತ್ತಾರಲ್ಲದೆ, ಪಂಚಾಯತಿ ಸದಸ್ಯರ ಹೊಣೆ ಹೊರಲು ಧೈರ್ಯಗಳಿಸಿಕೊಳ್ಳುತ್ತಾನೆ. ಆದ್ದರಿಂದ ಕಥೆ ಮನರಂಜಿಸುವ ಜೊತೆಗೆ ಕಲಿಯಲು ನೆರವಾಗುತ್ತದೆ. ಕಥೆಯನ್ನು ಒಂದಕ್ಕಿಂತ ಹೆಚ್ಚು ಬಗೆಯಲ್ಲಿ ವ್ಯಾಖ್ಯಾನಿಸಬಹುದು ಮತ್ತು ಅದು ಒಂದಕ್ಕಿಂತ ಹೆಚ್ಚು ಉದ್ದೇಶಗಳನ್ನು ಒಳಗೊಂಡಿರುತ್ತದೆ.

ಕೆಳಗಿನ ವಿಷಯಗಳನ್ನು ತಿಳಿಸಲು ಮೇಲಿನ ವಿಧಾನವನ್ನು ಬಳಸಬಹುದು. ಆತ್ಮವಲೋಕನೆ, ಸ್ವಸಾಮರ್ಥ್ಯ ಗ್ರಹಿಕೆ ಅಧಿಕಾರ ವಿಕೇಂದ್ರಿಕರಣ, ಪಂಚಾಯಿತಿಗಳಲ್ಲಿ ಮಹಿಳೆಯರ ಪ್ರಾಮುಖ್ಯತೆ, ವ್ಯಕ್ತಿ ಚಿತ್ರಣ, ಒಗ್ಗಟ್ಟಿನಿಂದಾಗುವ ಪ್ರಯೋಜನ (ಲಾಭ), ಗುಂಪು ಚಿಂತನೆ ಮುಂತಾದವು ಕುರಿತು ತಿಳಿಹೇಳಲು ನೆರವಾಗುತ್ತವೆ. ತರಬೇತಿದಾರರು ಬರಿ ಕಥೆ ಹೇಳುವವರು ಮಾತ್ರವಲ್ಲ, ಬದಲಿಗೆ ಶಿಬಿರಾರ್ಥಿಗಳಲ್ಲಿ ವಿಮರ್ಶಾತ್ಮಕ ಗುಣಗಳನ್ನು ಉತ್ತೇಜಿಸುವ ಕಲೆಗಾರರಾಗಿರಬೇಕು.



ತರಬೇತಿದಾರರು, ಒಳ್ಳೆಯದ ಧ್ವನಿ ಹೊಂದಿದ್ದು ಸಂದರ್ಭೋಚಿತವಾಗಿ ಹಾವಭಾವ ಪ್ರದರ್ಶಿಸುವದರೊಂದಿಗೆ ಅವಶ್ಯಕವೆನಿಸಿದ್ದಲ್ಲಿ ಚಿತ್ರ, ಹಾಡು ಮುಂತಾದವುಗಳನ್ನು ಬಳಸಿ ವಿಷಯವನ್ನು ಪರಿಣಾಮಕಾರಿಯಾಗಿ ಕಲಿಯುವಂತೆ ಮಾಡುವ ಚಾತುರ್ಯವನ್ನು ಹೊಂದಿರಬೇಕು.

ಕಥೆಗಳನ್ನು ಸುಲಭವಾಗಿ ನೆನಪಿನಲ್ಲಿಟ್ಟು ಕೊಳ್ಳಬಹುದು ಸಾಮಾನ್ಯವಾಗಿ ಪರಿಚಿತವಾದ ಕಥೆಗಳನ್ನೇ ವಿಷಯಕ್ಕನುಗುಣವಾಗಿ ಬಳಸುವುದರಿಂದ ಶಿಬಿರಾರ್ಥಿಗಳು ತುಲನಾತ್ಮಕ ಸಂಬಂಧ ಕಲ್ಪಿಸಿಕೊಳ್ಳಲು ಸಹಾಯವಾಗುತ್ತದೆ. ಗ್ರಾಮದ ಸಾಮಾನ್ಯ ಜನರು ಸಹ ವಿಷಯಗಳನ್ನು ಸುಲಭವಾಗಿ ಕಲಿಯುವಂತೆ ಮಾಡುವ ಕೌಶಲ್ಯಗಳನ್ನು ತರಬೇತಿದಾರರು ಹೊಂದಿರಬೇಕು.

*ಉದ್ದೇಶ :* ಚುನಾಯಿತ ಮಹಿಳಾ ಪ್ರತಿನಿಧಿಗಳಲ್ಲಿ ಆತ್ಮವಿಶ್ವಾಸ ಮೂಡಿಸುವುದು ಹಾಗೂ ಬೆಳೆಸುವುದು.

*ಗುಂಪಿನ ಗಾತ್ರ :* 20 ರಿಂದ 25 ಜನ

*ಸಮಯ :* 30 ನಿಮಿಷ

*ಸಂಪನ್ಮೂಲ ವ್ಯಕ್ತಿ :* ಅನುಭವಿ ತರಬೇತುದಾರರು

*ಸ್ಥಳ :* ದೊಡ್ಡ ಕೊಠಡಿ (ಸಭಾಂಗಣ)

ಬೇಕಾದ ಸಾಧನ ಸಲಕರಣೆಗಳು : ಜಮಖಾನ / ಚಾಪೆ

ಪ್ರಕ್ರಿಯೆ :

*1ನೇ ಹಂತ :* ಅರ್ಧ ವೃತ್ತಾಕಾರದಲ್ಲಿ ಕುಳಿತುಕೊಳ್ಳುವಂತೆ ತರಬೇತಿದಾರರು ಶಿಬಿರಾರ್ಥಿಗಳಿಗೆ ಹೇಳಬೇಕು

*2ನೇ ಹಂತ :* ತರಬೇತುದಾರರು ಎಲ್ಲರಿಗೂ ಕಾಣಿಸುವಂತೆ ಮಧ್ಯದಲ್ಲಿ ನಿಲ್ಲಬೇಕು.



*3ನೇ ಹಂತ :* ತರಬೇತಿದಾರರು ಸೂಕ್ತ ಸಮಯದಲ್ಲಿ ಸೂಕ್ತ ನಿರ್ಧಾರ ಕೈಗೊಂಡು ಗ್ರಾಮಸ್ಥರಿಗೆ ಅನುಕರಣೀಯಳಾದ ಪಾರ್ವತಿಯ ಸತ್ಯಕತೆಯನ್ನು ನಿರೂಪಿಸುತ್ತಾರೆ.

"ಗ್ರಾಮೀಣ ಮಹಿಳೆ, ಪಾರ್ವತಿ ತನ್ನ ಬದುಕಿನ ಬಹುತೇಕ ಭಾಗವನ್ನು ಕುಟುಂಬದ ಪಾಲನೆ ಮನೆಗೆ ಸಂಬಂಧಿಸಿದ ವಿಚಾರಗಳಲ್ಲಿ ಕಾಳಜಿ ವಹಿಸುವಲ್ಲಿ ನಿರತಳಾಗಿರುತ್ತಿದ್ದಳು. ಅಲ್ಲದೆ ಸರಾಯಿ ಅಂಗಡಿಯೊಂದನ್ನು ನಡೆಸುತ್ತಾ ಕುಟುಂಬಕ್ಕೆ ಆರ್ಥಿಕವಾಗಿಯೂ ನೆರವಾಗಿರುತ್ತಾಳೆ. ಸರ್ಕಾರ ಪಂಚಾಯ್ತಿಗೆ ಮಹಿಳೆಯರನ್ನು ಆರಿಸಲು ನಿರ್ಧರಿಸಿದ್ದು ಆಕೆಯ ಬದುಕಿನಲ್ಲಿ ತಿರುವು ತರುತ್ತದೆ. ಪಂಚಾಯ್ತಿ ಎಂದರೇನೆಂದೇ ಆಕೆಗೆ ತಿಳಿದಿರಲಿಲ್ಲ. ಆದರೆ, ಆಕೆ ಆತ್ಮ ವಿಶ್ವಾಸವುಳ್ಳವಳು. ಅತ್ಯುತ್ಸಾಹದಿಂದ ಚುನಾವಣೆಯಲ್ಲಿ ಸ್ಪರ್ಧಿಸಲು ನಿರ್ಧರಿಸುತ್ತಾಳೆ. ಅದೃಷ್ಟ ಆಕೆಯ ಪರವಾಗಿದ್ದರಿಂದ ಆಕೆ ಚುನಾವಣೆಯಲ್ಲಿ ಗೆದ್ದು ಅಧ್ಯಕ್ಷಳಾಗುತ್ತಾಳೆ. ಆದರೂ, ಪಾರ್ವತಿ ಮೊದಲಿನಂತೆ ತನ್ನ ಕೆಲಸ ಮುಂದುವರಿಸುತ್ತಿರುತ್ತಾಳೆ.

ಒಂದು ದಿನ ತನ್ನ ಅಂಗಡಿ ಮುಂದೆ ಜನಜಂಗುಳಿ ಇರುವುದನ್ನು ಆಕೆ ನೋಡುತ್ತಾಳೆ. ಅಂಗಡಿಯನ್ನು ಮುಚ್ಚಿ, ಸ್ಥಳಕ್ಕೆ ತೆರಳಿ ನೋಡಿದಾಗ ವ್ಯಕ್ತಿಯೊಬ್ಬ ರಸ್ತೆಯಲ್ಲಿ ಬಿದ್ದಿರುವುದು ಕಾಣುತ್ತದೆ. ಅವನ ಸುತ್ತಮುತ್ತಲೂ ಜನ ನಿಂತಿರುತ್ತಾರೆ. ಅವನ ಬಟ್ಟೆ ಹರಿದು ಹೋಗಿದ್ದು ಆತ ಚಿಂತಾಜನಕ ಸ್ಥಿತಿಯಲ್ಲಿರುತ್ತಾನೆ. ಆಕೆ ವಿಚಾರಿಸಿದಾಗ ನಿನ್ನಿಂದಲೇ ಈ ಸಮಸ್ಯೆ ಉದ್ಭವವಾಯಿತು ಎಂದು ಎಲ್ಲರೂ ಹೇಳುತ್ತಾರೆ. ಇಂಥ ಪರಿಸ್ಥಿತಿಗೆ ಸಾರಾಯಿಯೇ ಮುಖ್ಯ ಕಾರಣ, ಹಳ್ಳಿಯಲ್ಲಿನ ಕಲಹಕ್ಕೂ ಅದೇ ಕಾರಣ ಎಂದು ಅಲ್ಲಿದ್ದ ಜನ ಹೇಳುತ್ತಾರೆ. ಮದ್ಯಪಾನ ಮಾಡಿದ್ದ ಈ ವ್ಯಕ್ತಿ, ಬಾಲಕಿಯೊಂದಿಗೆ ಅನುಚಿತವಾಗಿ ವರ್ತಿಸಿದ್ದು ಜನ ಹೇಳುತ್ತಾರೆ. ಪಾರ್ವತಿಗೆ ಇದರಿಂದ ದೊಡ್ಡ ಆಘಾತವಾಗುತ್ತದೆ. ಆಕೆ ತನ್ನ ಅಂಗಡಿಯನ್ನು ಶಾಶ್ವತವಾಗಿ ಮುಚ್ಚಲು ನಿರ್ಧರಿಸುತ್ತಾಳೆ. ಅಲ್ಲದೆ ಸಾರಾಯಿ ವಿರೋಧಿ ಚಳುವಳಿಯಲ್ಲಿ ಭಾಗವಹಿಸಿ ಗ್ರಾಮವನ್ನು ಸಾರಾಯಿ ಮುಕ್ತ ಗ್ರಾಮವನ್ನಾಗಿಸಲು ಪಣ ತೊಡುತ್ತಾಳೆ. ನಂತರ ಸಾರಾಯಿ ಮಾರಾಟಗಾರರಿಗೆ ಪರಿಹಾರ ಇದಕ್ಕಾಗಿ ಜನರ ನೆರವನ್ನು ಆಕೆ ಪಡೆದು ಕೊಡಿಸುತ್ತಾಳೆ. ಕೊನೆಯಲ್ಲಿ ಗ್ರಾಮಸ್ಥರ ಸಹಕಾರದೊಂದಿಗೆ ತನ್ನ ಕೆಲಸದಲ್ಲಿ ಪಾರ್ವತಿ 'ಯಶಸ್ವಿ'ಯಾಗುತ್ತಾಳೆ.

**ತರಬೇತುದಾರರ ಪಾತ್ರ :** ಈ ಹಂತದಲ್ಲಿ, ಕತೆಯನ್ನು ನಿಲ್ಲಿಸಿ ತರಬೇತಿದಾರರು ಕಥೆಯ ಬಗ್ಗೆ ಯೋಚಿಸಿ, ಚರ್ಚಿಸಲು ತಿಳಿಸಿದರು. ನಂತರ ಪಾರ್ವತಿಯು ಹೇಗೆ ತನ್ನ ಮನೋಬಲದಿಂದ ಸಮಾಲೋಚಿತ ನಿರ್ಣಯ ಕೈಗೊಂಡು ತನ್ನ ಕರ್ತವ್ಯ ನಿರ್ವಹಿಸುವಲ್ಲಿ ಯಶಸ್ವಿಯಾದಳು ಎಂಬುದನ್ನು ಅರ್ಥಪೂರ್ಣವಾಗಿ ವಿವರಿಸಿದರು.

**ಈ ವಿಧಾನದ ಪರಿಣಾಮ :** ಪ್ರತಿ ಶಿಬಿರಾರ್ಥಿಯೂ ತನ್ನ ಅಂತಃಶಕ್ತಿಯನ್ನು ಅರ್ಥೈಸಿಕೊಂಡು ಬೆಳೆಸಿಕೊಳ್ಳಬೇಕು. ಆತ್ಮವಿಶ್ವಾಸದಿಂದ ಎಂಥ ಪರಿಸ್ಥಿತಿಯನ್ನು ನಿಭಾಯಿಸಬಹುದು ಎಂಬುದನ್ನು ಮನವರಿಕೆ ಮಾಡಿಸಲಾಯಿತು.

## ಸಹಭಾಗಿ ಉಪನ್ಯಾಸ ವಿಧಾನ

**(Participatory Lecture Method)**

ಈ ವಿಧಾನದಲ್ಲಿ ಶಿಬಿರಾರ್ಥಿಗಳು ಕೂಡ ಚರ್ಚೆಯಲ್ಲಿ ಭಾಗವಹಿಸುತ್ತಾರೆ. ಶಿಬಿರಾರ್ಥಿಗಳಿಂದ ಹೆಚ್ಚಿನ ವಿಚಾರಗಳನ್ನು ಹೊರತೆಗೆಯಬೇಕು. ನಡು ನಡುವೆ ಉಂಟಾಗುವ ವಿಚಾರ ಕಂದಕವನ್ನು ನಿರೂಪಕ/ಕಿ ತುಂಬಬೇಕು, ಪ್ರತಿಯೊಬ್ಬ ಶಿಬಿರಾರ್ಥಿಗೂ ಮಾತನಾಡಲು ಮತ್ತು ತನ್ನ ಅಭಿಪ್ರಾಯ ಹಂಚಿಕೊಳ್ಳಲು ಅವಕಾಶ ಇರುತ್ತದೆ. ತಾವು ಗುಂಪಿನೊಂದಿಗಿದ್ದೇವೆ ಎಂಬ ಭಾವನೆ ಪ್ರತಿಯೊಬ್ಬರಲ್ಲೂ ಮೂಡುತ್ತದೆ. ಉಪನ್ಯಾಸದಲ್ಲಿ ಸಂದರ್ಭೋಚಿತವಾಗಿ ಸಂಪನ್ಮೂಲ ಪುಸ್ತಕ, ಪೋಸ್ಟರ್, ಚಾರ್ಟ್ ಇತ್ಯಾದಿಗಳನ್ನು (ತರಬೇತುದಾರ) ಬಳಸಿಕೊಳ್ಳಬೇಕು.

*ವಿಷಯ :* ಗ್ರಾಮ ಪಂಚಾಯ್ತಿ ನಿಧಿ

*ಉದ್ದೇಶ :* ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಗ್ರಾಮ ಪಂಚಾಯ್ತಿ ನಿಧಿ ಕುರಿತು ಹಾಗೂ ಅದರ ಸದ್ಬಳಕೆ ಕುರಿತು ಅರಿವು ಮೂಡಿಸುವುದು.

*ಗುಂಪಿನ ಗಾತ್ರ :* 20 ರಿಂದ 25 ಮಂದಿ

*ಸಮಯ :* 45 ರಿಂದ 60 ನಿಮಿಷ

*ಸಂಪನ್ಮೂಲ ವ್ಯಕ್ತಿ :* ಅನುಭವಿ ತರಬೇತುದಾರರು

*ಸ್ಥಳ :* ದೊಡ್ಡ ಕೊಠಡಿ

ಬೇಕಾದ ಸಾಧನ ಸಲಕರಣೆಗಳು : ಚಾಟ್, ಪೋಸ್ಟರ್, ಸಂಪನ್ಮೂಲ ಪುಸ್ತಕಗಳು.

ಪ್ರಕ್ರಿಯೆ :

*1ನೇ ಹಂತ :* ಬಳಸಿದ ಸಾಧನ ಸಲಕರಣೆಗಳು ಕಾಣುವಂತೆ ಶಿಬಿರಾರ್ಥಿಗಳನ್ನು ಅರ್ಧ ವೃತ್ತಾಕೃತಿಯಲ್ಲಿ ಕೂರಿಸಬೇಕು



*2ನೇ ಹಂತ :* ವಿಷಯ ಪರಿಚಯಿಸಿ ನಂತರ ಚರ್ಚೆಯನ್ನು ಪ್ರಾರಂಭಿಸಬೇಕು.

*3ನೇ ಹಂತ :* "ಗ್ರಾಮ ಪಂಚಾಯ್ತಿಗೆ ಸರಕಾರದಿಂದ ಎಷ್ಟು ಹಣ ಬಿಡುಗಡೆ ಆಗುತ್ತದೆ ಎಂದು ನಿಮಗೆ ತಿಳಿದಿದೆಯೇ? ಎಂದು ಮಹಿಳೆಯರನ್ನು ತರಬೇತುದಾರರು ಕೇಳಬೇಕು.

*4ನೇ ಹಂತ :* ಅವರಿಗೆ ಸರಿಯಾದ ಮೊತ್ತ ತಿಳಿಯದಿದ್ದರೆ, ಸರಿಯಾದ ಮೊತ್ತವನ್ನು ತಿಳಿಸಬೇಕು. (ಉದಾ : 3.5 ಲಕ್ಷ ರೂ.)

*5ನೇ ಹಂತ :* ನಿಧಿಯನ್ನು ಹೇಗೆ ಬಳಸಬೇಕೆಂಬ ಕುರಿತು ಚರ್ಚೆ ಆರಂಭಿಸಬೇಕು.

*6ನೇ ಹಂತ :* ಅವರಿಂದ ಪ್ರತಿಕ್ರಿಯೆ ಬಂದ ನಂತರ, ಹಣವನ್ನು ಹೇಗೆ ಸೂಕ್ತವಾಗಿ ವಿನಿಯೋಗಿಸಬೇಕೆಂದು ಚಾರ್ಟ್ ಮೂಲಕ ವಿವರಿಸಬೇಕು.

***7ನೇ ಹಂತ :*** ಅನಂತರ ಯಾವ ಮೂಲಗಳಿಂದ ಪಂಚಾಯ್ತಿಗೆ ಹಣ ಬರುತ್ತದೆ? ಎಂದು ಕೇಳಿದಾಗ ನೀರಿನ ತೆರಿಗೆ, ಮನೆಗಂದಾಯ, ಬಾಡಿಗೆ, ರಸ್ತೆ, ಮರಗಳ ಹರಾಜು ಎಂದು ಉತ್ತರಿಸಬಹುದು.

**ತರಬೇತುದಾರರ ಪಾತ್ರ :** ಚರ್ಚೆಯ ಮಧ್ಯೆ ಮೌನ ನೆಲೆಸದಂತೆ ತರಬೇತುದಾರರು ನೋಡಿಕೊಳ್ಳಬೇಕು. ಮಾತಿನ ಮಧ್ಯೆ ಚರ್ಚೆ ನಿಲ್ಲುತ್ತದೆ ಎಂದು ಗೊತ್ತಾದ ತಕ್ಷಣ, ಅದನ್ನು ಪೂರ್ಣಗೊಳಿಸಲು ಪ್ರಯತ್ನಿಸಬೇಕು ಮತ್ತು ಚರ್ಚೆ ಮುಂದುವರಿಯಲು ಉತ್ತೇಜನ ನೀಡಬೇಕು. ಯಾವುದೇ ಸಂದರ್ಭದಲ್ಲೂ ಆತ/ಆಕೆ ಸಂಪೂರ್ಣ ವಿವರಣೆ ನೀಡಬಾರದು.

**ಫಲಿತಾಂಶ :** ಚರ್ಚೆಯ ಕೊನೆಗೆ, ಮಹಿಳಾ ಪ್ರತಿನಿಧಿಗಳು ತಮ್ಮ ಪಾಲ್ಗೊಳ್ಳುವಿಕೆಯ ಬಗ್ಗೆ ಸಂತೃಪ್ತರಾಗಿರುತ್ತಾರೆ. ಚರ್ಚೆ ಆರಂಭಿಸುವ ಮೊದಲು ವಿಷಯದ ಕುರಿತು ತಮಗೇನು ತಿಳಿಯದು ಎಂದು ಅವರು ಭಾವಿಸಿರುತ್ತಾರೆ. ಚರ್ಚೆ ಮುಂದುವರಿದಂತೆ ಪೂರ್ತಿ ಮಾತು ಅವರದೇ ಆಗುತ್ತದೆ. ತಮ್ಮ ಸಾಮರ್ಥ್ಯ ಹಾಗೂ ಅನುಭವ ಕುರಿತ ಅವರ ಆತ್ಮವಿಶ್ವಾಸ ಹೆಚ್ಚುತ್ತದೆ.

**ಟಿಪ್ಪಣಿಗೆ ಜಾಗ**

## ನಿಗಧಿತ ಗುಂಪು ಚರ್ಚೆ
*(Focus Group Discussion)*

ನಿರ್ದಿಷ್ಟ ಗುಂಪುಗಳು ಔಪಚಾರಿಕವಾಗಿ ರಚಿಸಲ್ಪಟ್ಟ, ನಿಗದಿತ ಸಮಯದಲ್ಲಿ, ನಿರ್ದಿಷ್ಟ ವಿಷಯ ಕುರಿತು ಚರ್ಚಿಸಲು ನಿರ್ಮಾಣಗೊಂಡ ಜನರ ಗುಂಪು ಇದರಲ್ಲಿ ಭಾಗಿಯಾಗುವವರು ಆಯಾಸಗೊಳ್ಳಬಹುದಾದ್ದರಿಂದ ಚರ್ಚೆ ಒಂದುವರೆ ಗಂಟೆಗಿಂತ ಹೆಚ್ಚು ಮುಂದುವರಿಯಬಾರದು. ಇದರಲ್ಲಿ ನಿರ್ದಿಷ್ಟ ವಿಷಯವೊಂದರ ಕುರಿತು ಚರ್ಚಿಸಲು ಸಮಾನ ಹಿನ್ನೆಲೆ ಮತ್ತು ಅನುಭವದ ಜನರನ್ನು ಒಗ್ಗೂಡಿಸಲಾಗುತ್ತದೆ. ಇಲ್ಲಿ ನೆನಪಿಡಬೇಕಾದ್ದು ಇದು ಗುಂಪು ಸಂದರ್ಶನವಲ್ಲ, ಚರ್ಚೆಯಲ್ಲಿ ಗುಂಪಿನ ಪ್ರತಿ ಸದಸ್ಯರು ಮುಕ್ತವಾಗಿ ತಮಗಿಷ್ಟವಾದ ವಿಷಯ ಕುರಿತು ಪರಸ್ಪರ ಚರ್ಚಿಸಬಹುದು. ವಿಷಯ ಕುರಿತು ಒಪ್ಪುವುದು ಮತ್ತು ಒಪ್ಪದಿರುವ ಸ್ವಾತಂತ್ರ್ಯ ಶಿಬಿರಾರ್ಥಿಗಳಿಗಿರಬೇಕು. ನಿರ್ದಿಷ್ಟ ಗುಂಪಿನಲ್ಲಿ ವಿವಿಧ ನಂಬಿಕೆ, ಅನಿಸಿಕೆ ಅಥವಾ ಯೋಚನೆಗಳಿರುತ್ತವೆ ಎಂಬುದನ್ನು ಈ ವಿಧಾನದಿಂದ ತಿಳಿಯಬಹುದು.

ವೈಯಕ್ತಿಕ ಸಂದರ್ಶನಕ್ಕಿಂತ ಅತಿ ಶೀಘ್ರವಾಗಿ ಹಾಗೂ ಅಲ್ಪ ವೆಚ್ಚದಲ್ಲಿ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಲು ಇದು ಸೂಕ್ತ ವಿಧಾನ. ಅನಕ್ಷರಸ್ಥ ಸಮುದಾಯದಿಂದ ಮಾಹಿತಿ ಪಡೆಯಲು ಈ ಪದ್ಧತಿ ಅತ್ಯುತ್ತಮ, ಸಮೀಕ್ಷಾ ಪ್ರಶ್ನಾವಳಿಗಳಲ್ಲಿ ಬಹಿರಂಗವಾಗದ ಹಲವು ಅಭಿಪ್ರಾಯ /ಮನೋವೃತ್ತಿ ಇಂಥ ಚರ್ಚೆಯಲ್ಲಿ ಬಯಲಾಗುತ್ತವೆ. ಸಮುದಾಯ ಇದನ್ನು ಸ್ವೀಕರಿಸಿದೆ ಏಕೆಂದರೆ, ಗುಂಪು ಚರ್ಚೆಯೆನ್ನುವುದು ಸಮುದಾಯದಲ್ಲಿ ಸ್ವಾಭಾವಿಕವಾಗಿ ಸಗಟಾಗಿ ಕಂಡು ಬರುವ ಸಂವಹನೆ ವಿಧಾನ. ಅಲ್ಲದೆ ಮನರಂಜನೆಯು ದೊರೆಯುತ್ತದೆ.

ಈ ಚರ್ಚೆಯಲ್ಲಿ ಭಾಗವಹಿಸುವಂತ ಶಿಬಿರಾರ್ಥಿಗಳಿಗೆ ತರಬೇತುದಾರರು ಸಹಾಯ ಹಸ್ತ ನೀಡಬೇಕು. ಪೂರ್ವಭಿಪ್ರಾಯವಾಗಿ ಸಿದ್ಧವಾದ ಪ್ರಶ್ನಾವಳಿ ಇರಬೇಕು. ಆದರೆ ಸುಗಮ ಮತ್ತು ಸಹಜ ಚರ್ಚೆಗನುವಾಗುವಂತೆ ಆಕೆ/ತ ಕೆಲವು ಅಗತ್ಯ ಪ್ರಶ್ನೆಗಳನ್ನು ಮನನಮಾಡಿಕೊಂಡಿರಬೇಕು. ಗ್ರಾಮಸಭಾ, ಗ್ರಾಮಪಂಚಾಯತಿ ಸಭೆ, ವಿಕೇಂದ್ರಿಕರಣ, ಸಾಮಾಜಿಕ ವಿಶ್ಲೇಷಣೆ ಇತ್ಯಾದಿ ವಿಷಯಗಳನ್ನು ಚರ್ಚೆಗೆ ಆರಿಸಬಹುದು.

*ವಿಷಯ :* ಮಹಿಳೆಯರ ಮತ್ತು ಪುರುಷರ ಅತಿ ಅವಶ್ಯಕ ಅಗತ್ಯಗಳು.

*ಉದ್ದೇಶ :* ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳೆಯರ ಪ್ರಾಮುಖ್ಯತೆಯನ್ನು ಸ್ಪಷ್ಟಿಕರಿಸುವುದು.



***ಗುಂಪಿನ ಗಾತ್ರ :*** 20 ರಿಂದ 25 ಮಂದಿ

***ಸಮಯ :*** 60 ರಿಂದ 90 ನಿಮಿಷ

***ಸಂಪನ್ಮೂಲ ವ್ಯಕ್ತಿ :*** ಅನುಭವಿ ತರಬೇತುದಾರರು

***ಸ್ಥಳ :*** ದೊಡ್ಡ ಕೊಠಡಿ

ಪ್ರಕ್ರಿಯೆ : ***1ನೇ ಹಂತ :*** ತರಬೇತಿದಾರ/ಳ ಆಯ್ದ ಪಂಚಾಯತಿ ಪ್ರತಿನಿಧಿಗಳು ಚರ್ಚೆಗೆ ಪೂರ್ವಭಾವಿಯಾಗಿ ಸಿದ್ಧರಾಗಲು ಅನುಕೂಲವಾಗುವಂತೆ ಚರ್ಚೆಯ ದಿನ ಮತ್ತು ಸಮಯವನ್ನು ಮೊದಲೇ ತಿಳಿಸಿರಬೇಕು.

***2ನೇ ಹಂತ :*** ಚರ್ಚೆಯ ದಿನದಂದು ಅಧ್ಯಕ್ಷ, ಉಪಾಧ್ಯಕ್ಷ, ಸದಸ್ಯರು, ಕಾರ್ಯದರ್ಶಿ ಹಾಗೂ ಇತರರು ಹಾಜರಿದ್ದಾರೆಯೇ ಎಂದು ತರಬೇತಿದಾರರು ಖಚಿತಪಡಿಸಿಕೊಳ್ಳಬೇಕು.



***3ನೇ ಹಂತ :*** ಪರಸ್ಪರ ಪರಿಚಯ, ಕುಶಲೋಪರಿಯ ನಂತರ ನಿರ್ದಿಷ್ಟ ಗುಂಪು ಚರ್ಚೆ ಪ್ರಾರಂಭಿಸಬೇಕು.

***4ನೇ ಹಂತ :*** ಪಂಚಾಯತ್ ರಾಜ್ ವ್ಯವಸ್ಥೆಯ ಪರಿಪ್ರೇಕ್ಷ ಕುರಿತು ಸಾಮಾನ್ಯ ಪ್ರಶ್ನೆ ಮೂಲಕ ನಿರೂಪಕ/ತರಬೇತುದಾರರು ಚರ್ಚೆಗೆ ನಾಂದಿ ಹಾಡಬೇಕು. ಕ್ರಮೇಣ ಪ್ರತಿಕ್ರಿಯೆ ಬರಲು ಆರಂಭವಾಗುತ್ತದೆ.

***5ನೇ ಹಂತ :*** ಮೂರು ಹಂತಗಳ ನಿರ್ವಹಣೆ ಯಾರು ಮಾಡುತ್ತಾರೆ ಹಾಗೂ ಗ್ರಾಮಪಂಚಾಯ್ತಿ ಎಷ್ಟು ಜನಸಂಖ್ಯೆಯಿದ್ದಲ್ಲಿ ರೂಪುಗೊಳ್ಳುತ್ತದೆ ಎಂಬ ಪ್ರಶ್ನೆಯನ್ನು ತರಬೇತುದಾರ ಕೇಳಬೇಕು.

***6ನೇ ಹಂತ:*** ಈ ಮೇಲಿನ ಪ್ರಶ್ನೆಗಳ ಚರ್ಚೆಯ ನಂತರ, ಮೀಸಲಾತಿ ನೀತಿ ಪಂಚಾಯತಿಗಳಲ್ಲಿ ಮಹಿಳೆ ಏಕೆ ಇರಬೇಕು ಎಂಬುದರ ಕುರಿತು ಚರ್ಚೆ. ಇಲ್ಲಿ ಕೆಲವರು ಮಹಿಳೆಯರಿಗೆ ಶೇ. 33 ರಷ್ಟು ಮೀಸಲಾತಿ ಇರುವ ವಿಷಯ ತಿಳಿದಿದ್ದ ಇನ್ನು ಕೆಲವರು ಕೇವಲ ಮೀಸಲಾತಿ ನೀತಿಯಿಂದಾಗಿ ಮಹಿಳೆಯರು ತಮ್ಮ ಮನೆಯಿಂದ ಹೊರಬಂದು ಹೊರ ಪ್ರಪಂಚವನ್ನು ವೀಕ್ಷಿಸುವುದು ಸಾಧ್ಯವಾಗಿದೆ ಎಂದು ವಾದಿಸಬಹುದು. ಮೀಸಲಾತಿ ನೀತಿ ಜಾರಿಗೆ ಬಂದಿರುವುದರಿಂದ ಅವರ ಅಗತ್ಯ ಪೂರೈಸಿಕೊಳ್ಳಲು ಅವಕಾಶ ದೊರೆತಿದೆ ಎಂದು ಹೇಳಬಹುದು.

***7ನೇ ಹಂತ :*** 'ಅಗತ್ಯ' ಎಂಬ ಶಬ್ದ ಬಂದಾಕ್ಷಣ ತರಬೇತುದಾರರು ಪುರುಷ ಮತ್ತು ಸ್ತ್ರೀಯರ ಸಾಮಾನ್ಯ ಅಗತ್ಯ ಕುರಿತು ಅನುವು ಮಾಡಿಕೊಡಬೇಕು.

*8ನೇ ಹಂತ :* ಪುರುಷರ ಸಾಮಾನ್ಯ ಅವಶ್ಯಕತೆಗಳನ್ನು / ಬೇಡಿಕೆಗಳನ್ನು ಹೀಗೆ ಪಟ್ಟಿಮಾಡಬಹುದು.

i. ಅತೀ ಸಮೀಪದ ನಗರಗಳಿಗೆ ಹೋಗಿಬರಲು ಅನುಕೂಲವಾಗುವಂತೆ ಉತ್ತಮ ಸಾರಿಗೆ ಸೌಲಭ್ಯ.

ii. ಮನರಂಜನಾ ಕಾರ್ಯಕ್ರಮ, ಮುಖ್ಯ ಸಮಾರಂಭಗಳು, ಮದುವೆ ಇತ್ಯಾದಿಗಳನ್ನು ನಡೆಸಲು ಸಮುದಾಯ ಭವನದ ಅಗತ್ಯ. ಇದು ಆದಾಯ ಕೂಡ ತರಬಲ್ಲದು.

**ಮಹಿಳೆಯರ ಸಾಮಾನ್ಯ ಅವಶ್ಯಕತೆಗಳನ್ನು / ಬೇಡಿಕೆಗಳ ಪಟ್ಟಿ :**

i. ಕೊಳವೆ ಬಾವಿ ದೂರದಲ್ಲಿರುವುದರಿಂದ ಮತ್ತು ನೀರು ತರಲು ಬಲುದೂರು ಹೋಗಬೇಕಾಗಿರುವುದರಿಂದ, ಮನೆ ಸಮೀಪ ಕುಡಿಯುವ ನೀರಿನ ಸೌಲಭ್ಯ

ii) ಬೀದಿ ದೀಪಗಳು

iii) ಉತ್ತಮ ಆಸ್ಪತ್ರೆ

iv) ಮಕ್ಕಳಿಗೆ ಶಾಲೆ

**ತರಬೇತುದಾರರ ಪಾತ್ರ :** ಪುರುಷ ಹಾಗೂ ಮಹಿಳಾ ಸದಸ್ಯರು ಪಟ್ಟಿ ಮಾಡಿದ 'ಸಾಮಾನ್ಯ ಅಗತ್ಯ' ಗಳನ್ನು ಕುರಿತು ನಿರೂಪಕ/ಕಿ ವಿಶ್ಲೇಷಿಸಬೇಕು. ಮಹಿಳೆಯರ ಅಗತ್ಯಗಳು, ಅವರ ದೈನಂದಿನ ಬದುಕಿಗೆ ಮುಖ್ಯವಾದುವು. ಇವೆಲ್ಲವೂ ತುರ್ತು ಅಗತ್ಯಗಳು ಆದರೆ ಪುರುಷರು ಅಗತ್ಯಗಳು ತುರ್ತು ಅಗತ್ಯಗಳಲ್ಲಿ ಅವನ್ನು ಮುಂದಿನ ಹಂತದಲ್ಲಿ ಈಡೇರಿಸಬಹುದು. ಮಹಿಳೆಯ ಕುಟುಂಬ ಮತ್ತು ಸಮಾಜದೊಂದಿಗೆ ನೇರ ಸಂಪರ್ಕ ಹೊಂದಿದ್ದಾರೆ. ಆಕೆ ಹಣಕಾಸು ವೆಚ್ಚ, ನಿರ್ವಹರಣೆ ಅಡುಗೆಯಿಂದ ಹಿಡಿದು ಕುಟುಂಬದ ಎಲ್ಲ ಸದಸ್ಯರ ಅಗತ್ಯಗಳನ್ನು ನಿರ್ವಹಿಸುತ್ತಾಳೆ. ಮನೆಯನ್ನು ಆಕೆ ಸಮರ್ಥವಾಗಿ ನಿಭಾಯಿಸಬಲ್ಲಳು ಎಂದರೆ ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ ನೀಡಿದಲ್ಲಿ ಗ್ರಾಮದ ಸಣ್ಣ ಸಮಾಜವನ್ನು ಕೂಡ ಆಕೆ ನಿರ್ವಹಿಸಬಲ್ಲಳು ಎಂದೇ ಅರ್ಥ. ಈ ವಿಶ್ಲೇಷಣೆಯೊಂದಿಗೆ ಪಂಚಾಯ್ತಿಯಲ್ಲಿ ಮಹಿಳೆಯರ ಪ್ರಾಮುಖ್ಯತೆ ಕುರಿತು ತರಬೇತುದಾರ ವಿವರಿಸುತ್ತಾರೆ.

ಸೂಚನೆ : 

- ಶಿಬಿರಾರ್ಥಿಗಳಿಗೆ ಕೇಳುವ ಪ್ರಶ್ನೆಗಳು ಚರ್ಚೆ ಸೂಕ್ತ ಹಾದಿಯಲ್ಲಿ ಮುಂದುವರಿಯಲು ಅವಕಾಶ ಕೊಡುವಂತಿರಬೇಕು.
- ತರಬೇತುದಾರರು ತಾನೇ ಚರ್ಚೆಯಲ್ಲಿ ಪ್ರಧಾನ ಪಾತ್ರ ವಹಿಸುವ ಬದಲು, ಭಾಗವಹಿಸಿದವರಿಗೆ ಮಾತನಾಡಲು ಉತ್ತೇಜನ ನೀಡಬೇಕು.

ವಿಧಾನದ ಪರಿಣಾಮ : ಪಂಚಾಯಿತಿಯಲ್ಲಿ ತಮ್ಮ ಇರುವಿಕೆಯ ಅಗತ್ಯ ಹಾಗೂ ತಮ್ಮ ಪಾತ್ರ ಕುರಿತು ಚುನಾಯಿತ ಮಹಿಳಾ ಪ್ರತಿನಿಧಿಗಳಲ್ಲಿ ಅರಿವು ಮೂಡುತ್ತದೆ.

ಟಿಪ್ಪಣಿಗೆ ಜಾಗ



# ನೇರ ಸಂವಾದ
## *(Horizontal Interactions)*

ಈ ವಿಧಾನದಲ್ಲಿ ಗ್ರಾಮಪಂಚಾಯಿತಿಯ ಚುನಾಯಿತ ಪ್ರತಿನಿಧಿಗಳ ತಂಡವನ್ನು ಇನ್ನೊಂದು ಪ್ರತಿನಿಧಿಗಳ ತಂಡದೊಡನೆ ಭೇಟಿ ಮಾಡಿಸಲು ಒಂದು ಗ್ರಾಮಪಂಚಾಯಿತಿಯಿಂದ ಇನ್ನೊಂದು ಗ್ರಾಮಪಂಚಾಯಿತಿಗೆ ಕರೆದೊಯ್ಯಲಾಗುತ್ತದೆ. ಅಲ್ಲಿ ಎರಡೂ ಗುಂಪುಗಳ ನಡುವೆ ಸಂವಾದ ಏರ್ಪಡಿಸಿ ಅವರವರ ಪಂಚಾಯಿತಿಗಳಿಗೆ ಸಂಬಂಧಿಸಿದಂತೆ ಅವುಗಳ ನಿರ್ವಹಣೆ, ಸಾಧನೆ, ವಿವಿಧ ವ್ಯವಹಾರಗಳಲ್ಲಿ ಪಾಲ್ಗೊಳ್ಳುವಿಕೆ ಮುಂತಾದ ವಿಷಯಗಳ ಕುರಿತು ಚರ್ಚಿಸಲಾಗುತ್ತದೆ, ವಿಚಾರ ವಿನಿಮಯ ಮಾಡಿಕೊಳ್ಳಲಾಗುತ್ತದೆ. ಹಾಗೂ ಅನುಭವಗಳನ್ನು ಹಂಚಿಕೊಳ್ಳಲಾಗುತ್ತದೆ. ಇಲ್ಲಿ ತರಬೇತುದಾರರು ಕೇವಲ ಚರ್ಚೆಯನ್ನು ಏರ್ಪಡಿಸುತ್ತಾರಷ್ಟೆ. ತಮ್ಮ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಕೆಲಸವನ್ನು ಆ ಎರಡು ಗಂಪುಗಳೇ ಸ್ವತಂತ್ರವಾಗಿ ನಡೆಸುತ್ತವೆ.

*ವಿಷಯ :* ಪಂಚಾಯಿತಿ ಚಟುವಟಿಕೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಮತ್ತು ಅವರ ಸಾಧನೆಗಳು.

*ಉದ್ದೇಶ :* ಮಹಿಳಾ ಪ್ರತಿನಿಧಿಗಳು ಅವರ ಸಾಧನೆಗಳು ಅನಿಸಿಕೆಗಳನ್ನು ಪರಸ್ಪರ ಹಂಚಿಕೊಳ್ಳುವುದು.

*ಗುಂಪಿನ ಗಾತ್ರ :* ತಲಾ 10-15 ಜನರ ಎರಡು ಗುಂಪು.

*ಸಮಯ :* 60 ನಿಮಿಷಗಳು

*ಸಂಯೋಜಕರು :* ಒಬ್ಬ ಅನುಭವಿ ತರಬೇತುದಾರರು.

*ಸ್ಥಳ :* ಒಂದು ಕೊಠಡಿ

*ಬೇಕಾದ ವಸ್ತುಗಳು :* ಏನೂ ಬೇಡ.

ಪ್ರಕ್ರಿಯೆ :

*ಮೊದಲ ಹಂತ :* ತಾವು ಭೇಟಿ ನೀಡುವ ಹಳ್ಳಿಯ ಪಂಚಾಯಿತಿ ಕಚೇರಿಯಲ್ಲಿ ಅತಿಥಿ ಮಹಿಳಾ ಪ್ರತಿನಿಧಿಗಳು ಸೇರುವರು.



*ಎರಡನೇ ಹಂತ :* ತರಬೇತಿದಾರರು ಒಂದು ಗುಂಪನ್ನು ಇನ್ನೊಂದು ಗುಂಪಿಗೆ ಪರಿಚಯ ಮಾಡಿಕೊಡುವರು.

*ಮೂರನೇ ಹಂತ :* ಸಂಯೋಜಕರು ಆ ಭೇಟಿಯ ಪ್ರಾಮುಖ್ಯತೆಯನ್ನು ವಿವರಿಸುತ್ತಾರೆ. 'ನಾವಿಲ್ಲಿ ನಿಮ್ಮ ಸಾಧನೆಯನ್ನು ಮತ್ತು ನಿಮಗಿರುವ ಅಡೆತಡೆಯನ್ನು ಆಲಿಸಲು ಬಂದಿದ್ದೇವೆ. ಇತರರಿಂದ ಇದನ್ನೆಲ್ಲ ಕೇಳಿದ್ದೆವು ಈಗ ಪ್ರತ್ಯಕ್ಷವಾಗಿ ನಿಮ್ಮಿಂದಲೇ ಅದನ್ನು ಕೇಳುವ ಉತ್ಸಾಹದಿಂದ ಬಂದಿದ್ದೇವೆ ಎಂದು ವಿವರಿಸುತ್ತಾರೆ.

*ನಾಲ್ಕನೇ ಹಂತ :* ಈಗ ಪ್ರತಿನಿಧಿಗಳು ತಮ್ಮ ಕೆಲಸ, ಚಟುವಟಿಕೆಗಳು, ತಾವು ಹೇಗೆ ಮನೆ ಮತ್ತು ಪಂಚಾಯಿತಿ ಕಚೇರಿ ಎರಡನ್ನೂ ನಿರ್ವಹಿಸುತ್ತಾರೆ, ತಮ್ಮ ಸಾಧನೆಗಳೇನು, ತಮಗಿರುವ ತೊಡಕುಗಳೇನು ಮತ್ತು ಅದನ್ನು

ಹೇಗೆ ನಿಭಾಯಿಸುತ್ತಾರೆ ಹಾಗೂ ಇತರೇ ಸಮಸ್ಯೆಗಳನ್ನು ಹೇಗೆ ಪರಿಹರಿಸಿಕೊಳ್ಳುತ್ತೇವೆ ಎಂಬುದರ ಕುರಿತು ವಿವರಿಸುತ್ತಾರೆ.

***ಐದನೇ ಹಂತ :*** ಆಗ ಅಲ್ಲಿಗೆ ಭೇಟಿ ನೀಡಿರುವ ಪ್ರತಿನಿಧಿಗಳ ಗುಂಪು ತಮ್ಮ ದೃಷ್ಟಿಕೋನವನ್ನು ಕೆಲಸ ಮತ್ತು ಚಟುವಟಿಕೆಗಳನ್ನು ಕುರಿತು ವಿವರಿಸುತ್ತಾರೆ.

**ತರಬೇತುದಾರರ ಪಾತ್ರ :** ಎರಡು ಗುಂಪುಗಳ ಚರ್ಚೆ ನಡುವೆ ಹಿತಕರವಾದ ವಾತಾವರಣವಿರುವಂತೆ ನೋಡಿಕೊಳ್ಳುವುದು ಸಂಯೋಜಕರ ಪ್ರಮುಖ ಕರ್ತವ್ಯ. ಹಾಗೂ ಎರಡು ಗುಂಪುಗಳ ನಡುವೆ ಚರ್ಚೆಯನ್ನು ಸಂಯೋಜಿಸುವ ಕೆಲಸವನ್ನು ಮಾತ್ರ ತರಬೇತಿದಾರರ ಮಾಡಬೇಕು. ಅಂದರೆ ಗುಂಪುಗಳು ತಾವಾಗಿಯೇ ಪರಸ್ಪರರ ಸಮಸ್ಯೆಗಳನ್ನು ಚರ್ಚಿಸಿ, ಪರಿಹಾರ ಕಂಡುಕೊಳ್ಳಬೇಕು ಮತ್ತು ಪರಸ್ಪರರ ಸಾಮರ್ಥ್ಯವನ್ನು ಅರಿತುಕೊಂಡು ಸಮಸ್ಯೆಯ ಪರಿಹಾರಕ್ಕಿರುವ ದಾರಿಗಳನ್ನು ತಾವಾಗಿಯೇ ಕಂಡುಕೊಳ್ಳಬೇಕು. ಗುಂಪುಗಳಿಗೆ ಸಂಯೋಜಕರು ತಮ್ಮ ಮೇಲೆ ಸ್ವಂತ ಅಭಿಪ್ರಾಯಗಳನ್ನು ಹೇರುತ್ತಿದ್ದಾರೆ ಎಂಬ ಭಾವನೆ ಬರದಂತೆ ನೋಡಿಕೊಳ್ಳಬೇಕು.

**ಫಲಿತಾಂಶ :** ಈ ವಿಧಾನದ ಸಂವಾದ ಅಲ್ಲಿ ಭಾಗವಹಿಸಿದವರ ನಡುವೆ ಹೆಚ್ಚು ಅರ್ಥಪೂರ್ಣ ಸಂಬಂಧ ಬೆಳೆಯುವಂತೆ ಮಾಡುತ್ತದೆ. ಬೇರೆ ಬೇರೆ ಭೌಗೋಳಿಕ ಹಿನ್ನೆಲೆಯಿಂದ ಬಂದ ಜನರು ಪರಸ್ಪರ ಚರ್ಚಿಸುವ ಚಿಂತನ-ಮಂಥನ ನಡೆಸುವ ಹಾಗೂ ಸ್ಥಳೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳನ್ನು ಹಂಚಿಕೊಳ್ಳುವ ಗುರಿಯೊಂದಿಗೆ ಒಂದೆಡೆ ಸೇರಿದಾಗ, ಕಲಿಕೆಗೆ ಒಳ್ಳೆಯ ವಾತಾವರಣ ನಿರ್ಮಾಣವಾಗುತ್ತದೆ. ಎರಡೂ ಗುಂಪುಗಳ ತಮ್ಮ ಸಾಧನೆಗಳನ್ನು ಪ್ರದರ್ಶಿಸಲು ಹೆಮ್ಮೆ ಪಟ್ಟುಕೊಳ್ಳುತ್ತಾರೆ.

**ಟಿಪ್ಪಣಿಗೆ ಜಾಗ**



# ಅಣಕು ಅಧಿವೇಶನ
## *(Mock Session)*

ಗ್ರಾಮಸಭೆಯ ಆಯೋಜನೆ, ಗ್ರಾಮಸಭೆಯ ನಡವಳಿಗಳು, ಅಲ್ಲಿ ನಡೆಯುವ ಚರ್ಚೆ, ಜನ ಪಾಲ್ಗೊಳ್ಳುವಿಕೆಯ ಮಹತ್ವ ಮತ್ತು ಗ್ರಾಮಸಭೆಯ ಕರ್ತವ್ಯ ಹಾಗೂ ಪ್ರಾಮುಖ್ಯತೆಯನ್ನು ಬಿಂಬಿಸಲು 'ಅಣಕು ಅಧಿವೇಶನ'ಗಳನ್ನು ನಡೆಸಲಾಗುತ್ತದೆ. ಅಣಕು ಅಧಿವೇಶನ ಪಾತ್ರಾಭಿನಯದಂತೆ ಇದ್ದರೂ ಅದಕ್ಕಿಂತ ಸ್ವಲ್ಪ ಭಿನ್ನವಾಗಿರುತ್ತದೆ. ಪಾತ್ರಾಭಿನಯವನ್ನು ಒಬ್ಬನೇ ನಿರ್ವಹಿಸಬಹುದು. ಆದರೆ ಅಣಕು ಅಧಿವೇಶನಕ್ಕೆ ಕನಿಷ್ಟ ಎರಡು ಅಥವಾ ಹೆಚ್ಚು ವ್ಯಕ್ತಿಗಳು ಪಾಲ್ಗೊಳ್ಳುವಿಕೆಯ ಅವಶ್ಯಕತೆ ಇದೆ. ಇದು ಕಲಿಕೆಯ ಒಂದು ಉತ್ತಮ ವಿಧಾನ. ಏಕೆಂದರೆ ಇಲ್ಲಿ ಭಾಗವಹಿಸುವವರು ವಿವಿಧ ಪಾತ್ರಗಳನ್ನು ನಿರ್ವಹಿಸುವುದರಿಂದ ಅವರೆಲ್ಲರೂ ಕಲಿಕೆಯ ಪ್ರಕ್ರಿಯೆಗೆ ಒಳಗೊಳ್ಳುತ್ತಾರೆ.

ಈ ವಿಧಾನದಿಂದ ಗ್ರಾಮಸಭೆಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬಹುದು. ಗ್ರಾಮಸಭೆ ಪ್ರಜಾಪ್ರಭುತ್ವದ ತಳಹದಿ. ಅಲ್ಲಿ ಗ್ರಾಮಸ್ಥರು ತಮ್ಮ ಹಳ್ಳಿಗೆ ಸಂಬಂಧಪಟ್ಟ ಸಮಸ್ಯೆ ಮತ್ತು ಆಕಾಂಕ್ಷೆಗಳನ್ನು ಸ್ಪಷ್ಟವಾಗಿ ಹೇಳಿಕೊಳ್ಳಬಹುದು. ಸಮಸ್ಯೆಯ ಪರಿಹಾರ ಯಾವಾಗಲೂ ಸಮಸ್ಯೆಯಿಂದ ಹೆಚ್ಚು ಪೀಡಿತರಾದವರಿಗೆ ಚೆನ್ನಾಗಿ ತಿಳಿದಿರುತ್ತದೆ. ದೂರ ಪ್ರದೇಶಗಳಲ್ಲಿ ಇರುವ ಸಂಸ್ಥೆಗಳು, ಸರಕಾರಿ ಇಲಾಖೆಗಳು ಮತ್ತು ಸರಕಾರ ಹಳ್ಳಿಗರ ಸಮಸ್ಯೆಗೆ ಸಮರ್ಪಕ ಮತ್ತು ಸರಿಯಾದ ಪರಿಹಾರವನ್ನು ನೀಡಲಾರವು. ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಸೂಕ್ತ ಸಲಹೆಗಳನ್ನು ನೀಡುವ ಅವಕಾಶ ಗ್ರಾಮಸ್ಥರಿಗೆ ಗ್ರಾಮಸಭೆಗಳಲ್ಲಿ ದೊರೆಯುತ್ತದೆ ಹಾಗೂ ಹಳ್ಳಿಗಳಿಗೆ ಸಂಬಂಧಿಸಿದ ಸಮಸ್ಯೆಗಳ ಮುಕ್ತ ಮತ್ತು ನೇರ ಚರ್ಚೆಗೆ ಗ್ರಾಮಸಭೆ ಒಂದು ಉತ್ತಮ ವೇದಿಕೆ ಒದಗಿಸುತ್ತದೆ. ಆದ್ದರಿಂದ ಗ್ರಾಮಸಭೆಯ ಸಾಮರ್ಥ್ಯ ಮತ್ತು ಶಕ್ತಿಯನ್ನು ಅರಿತುಕೊಳ್ಳುವುದು ಪಂಚಾಯಿತಿ ಪ್ರತಿನಿಧಿಗಳಿಗೆ ಅತ್ಯವಶ್ಯಕ.



*ವಿಷಯ :* ಗ್ರಾಮಸಭೆ

*ಉದ್ದೇಶ :* ಗ್ರಾಮಸಭೆಯ ಪ್ರಾಮುಖ್ಯತೆ ಹಾಗೂ ಗ್ರಾಮಸಭೆಗಳಲ್ಲಿ ಮಹಿಳೆಯರ ಪಾತ್ರವನ್ನು ಅರ್ಥಮಾಡಿಕೊಳ್ಳುವುದು

*ಗುಂಪಿನ ಗಾತ್ರ :* 20-25 ಅಭ್ಯರ್ಥಿಗಳು

*ಸಮಯ :* 60 ನಿಮಿಷ

*ಸಂಯೋಜಕರು :* ಒಬ್ಬ ಅನುಭವಿ ತರಬೇತುದಾರರು

*ಸ್ಥಳ:* ಒಂದು ಕೊಠಡಿ

*ಅವಶ್ಯಕ ವಸ್ತುಗಳು:* ಯಾವುದೂ ಇಲ್ಲ

ಪ್ರಕ್ರಿಯೆ : *ಒಂದನೇ ಹಂತ:* ಸಂಯೋಜಕರು ಮೊದಲು ಚರ್ಚೆಯ ವಿಷಯವನ್ನು ಪ್ರತಿನಿಧಿಗಳಿಗೆ ಪರಿಚಯಿಸುತ್ತಾರೆ ಅವರ ಗ್ರಾಮಗಳಲ್ಲಿ ಗ್ರಾಮಸಭೆ ನಡೆಯುತ್ತದೆಯೇ ಎಂದು ಕೇಳುತ್ತಾರೆ.

*ಎರಡನೇ ಹಂತ:* ಪ್ರತಿನಿಧಿಗಳು ತಾವು ಗ್ರಾಮಸಭೆಯನ್ನು ನೋಡಿದ್ದೇವೆ ಎಂದಾಗ ಅದನ್ನು ಅಭಿನಯಿಸಲು ತಿಳಿಸುತ್ತಾಳೆ.

*ಮೂರನೇ ಹಂತ:* ತರಬೇತುದಾರರು ಪ್ರತಿನಿಧಿಗಳಿಗೆ 15 ನಿಮಿಷ ಕಾಲಾವಕಾಶ ನೀಡುತ್ತಾರೆ. ಆ ಸಮಯದಲ್ಲಿ ಶಿಬಿರಾರ್ಥಿಗಳು ಅಧ್ಯಕ್ಷೆ, ಉಪಾಧ್ಯಕ್ಷೆ, ಕಾರ್ಯದರ್ಶಿ, ಇತರ ಪಂಚಾಯಿತಿ ಸದಸ್ಯರು ಮತ್ತು ಗ್ರಾಮಸ್ಥರ ಪಾತ್ರಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ಮತ್ತು ಪೂರ್ವ ತಯಾರಿ ನಡೆಸುತ್ತಾರೆ.

*ನಾಲ್ಕನೇ ಹಂತ:* ಈಗ ಪ್ರತಿನಿಧಿಗಳು ತಾವು ಕಂಡ ಗ್ರಾಮಸಭೆ ಸನ್ನಿವೇಶವನ್ನು ಅಭಿನಯಿಸುತ್ತಾರೆ. ಪ್ರತಿನಿಧಿಗಳು ಅಣಕು ಗ್ರಾಮಸಭೆಯನ್ನು ಪ್ರಸ್ತುತಪಡಿಸುವಾಗ ತರಬೇತುದಾರರು ಪ್ರತಿ ದೃಶ್ಯ ಮತ್ತು ಅಭಿನಯವನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ.

ಐದನೇ ಹಂತ: ಅಣಕು ಅಧಿವೇಶನ ಮುಗಿದ ನಂತರ ತರಬೇತುದಾರರು ಅದನ್ನು ವಿಶ್ಲೇಷಿಸುತ್ತಾರೆ. ವಿಶ್ಲೇಷಣೆ ಮತ್ತು ಚರ್ಚೆಗೆ ಸುಮಾರು 25 ನಿಮಿಷ ಬೇಕಾಗುತ್ತದೆ.

**ತರಬೇತುದಾರರ ಪಾತ್ರ:** ಅಧಿವೇಶನದ ವಿಶ್ಲೇಷಣೆ ನಡೆಸಿದ ಬಳಿಕ ತರಬೇತುದಾರರು ಗ್ರಾಮಸಭೆಯ ಕೆಲಸಕಾರ್ಯಗಳ ಪ್ರಾಮುಖ್ಯತೆ ಕುರಿತು ಪ್ರತಿನಿಧಿಗಳಿಗೆ ವಿವರಿಸುತ್ತಾರೆ. ಗ್ರಾಮಸಭೆಯನ್ನು ಹೇಗೆ ನಡೆಸಬೇಕು, ಯಾವಾಗ ನಡೆಸಬೇಕು, ಯಾರೆಲ್ಲಾ ಸಭೆಯಲ್ಲಿ ಭಾಗವಹಿಸಬಹುದು ಎಂಬ ಅಂಶಗಳನ್ನು, ಗ್ರಾಮಸಭೆಯಲ್ಲಿ ಮಹಿಳೆಯರ ಪ್ರಾತಿನಿಧ್ಯತ್ವಕ್ಕೆ ವಿಶೇಷ ಒತ್ತು ನೀಡಿ ವಿವರಿಸುತ್ತಾರೆ.

**ಫಲಿತಾಂಶ :** ಅಣಕು ಅಧಿವೇಶನ ಪ್ರತಿನಿಧಿಗಳ ಮೇಲೆ ವಿಶೇಷ ಪರಿಣಾಮ ಬೀರುತ್ತದೆ. ಅವರು ಕೂಡ ತಮ್ಮ ದೃಷ್ಟಿಕೋನಗಳನ್ನು ವಿವರಿಸುತ್ತಾರೆ. ಕೆಲವರು 'ನಮ್ಮ ಹಳ್ಳಿಗಳಲ್ಲಿ ಇಂಥ ಸಭೆಗಳನ್ನು ನಾವು ನೋಡಿಯೇ ಇಲ್ಲ' ಎಂದು ಉದ್ಗರಿಸಬಹುದು. ಇನ್ನು ಕೆಲವರು 'ನಮ್ಮಲ್ಲಿ ಗ್ರಾಮಸಭೆಗಳು ನಡೆಯುತ್ತವೆ. ಆದರೆ ನೀವು ವಿವರಿಸಿದ್ದು ಅದಕ್ಕಿಂತ ತುಂಬ ಭಿನ್ನವಾಗಿದೆ' ಎನ್ನುತ್ತಾರೆ. ಇನ್ನೂ ಕೆಲವರು ನಮ್ಮಲ್ಲಿ ಗ್ರಾಮಸಭೆ ಇದೆ, ಅದು ಕೇವಲ 'ಸಾಲದ' ಸಭೆ ಮಾತ್ರ ಆಗಿ ಉಳಿದುಕೊಂಡಿದೆ' ಎಂದು ಹೇಳಬಹುದು.

ಈ ಅಧಿವೇಶನದ ಮೂಲಕ ಚುನಾಯಿತ ಮಹಿಳಾ ಪ್ರತಿನಿಧಿಗಳು ಗ್ರಾಮಸಭೆಯ ಸ್ಪಷ್ಟ ಚಿತ್ರಣ ಪಡೆಯುವರದಲ್ಲದೆ, ಅದರಲ್ಲಿ ತಮ್ಮ ಪಾತ್ರವೇನು ಎಂಬುದನ್ನು ತಿಳಿದುಕೊಳ್ಳುತ್ತಾರೆ.

ಟಿಪ್ಪಣಿಗೆ ಜಾಗ

## ಭಾಗ-2

**ಆಟಗಳು:**

ಜನ ಪ್ರತಿನಿಧಿಗಳು ತೆಗೆದುಕೊಳ್ಳುವ ಯಾವುದೇ ನಿರ್ಧಾರ ಸಮುದಾಯದ ಹಿತದೃಷ್ಟಿಗಾಗಿರಬೇಕು ಹೊರತು ವೈಯಕ್ತಿಕ ಹಿತದೃಷ್ಟಿಯದಾಗಿರಬಾರದು. ಸರಕಾರ ಜಾರಿಗೊಳಿಸುವ ಯೋಜನೆಗಳಲ್ಲಿ ಸಮುದಾಯದ ಎಲ್ಲಾ ವರ್ಗದ ಜನರೂ ಪಾಲ್ಗೊಳ್ಳುವಂತಿರಬೇಕು.

*ವಿಷಯ :* ಮಹಿಳಾ ಮೀಸಲಾತಿ

ವೃತ್ತದ ಆಟ : ಪಂಚಾಯತಿಯಲ್ಲಿ ಕೈಗೊಳ್ಳುವ ತೀರ್ಮಾನಗಳು ಸಮುದಾಯದ ಸಮಸ್ಯೆಗೆ ಸಂಬಂಧಪಟ್ಟಿರುತ್ತವೆ. ಈ ಸಮಸ್ಯೆಗಳನ್ನು ಬಗೆ ಹರಿಸಲು ಸಮುದಾಯಕ್ಕೆ ಹಣಕಾಸಿನ ಅವಶ್ಯಕತೆ ಇದ್ದು, ಅದನ್ನು ಸಮುದಾಯ ತನ್ನಲ್ಲೇ ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಹಣಕಾಸು ಸಮವಾಗಿ ವಿತರಣೆಯಾಗಲು ಅಧಿಕಾರವನ್ನು ಕೂಡ ವಿವಿಧ ಜನರಲ್ಲಿ ಸಮನಾಗಿ ಹಂಚಬೇಕಾಗುತ್ತದೆ. ಈ ಕಾರಣಕ್ಕಾಗಿ ಸರಕಾರ ಪಂಚಾಯತಿಗಳಲ್ಲಿ ಪರಿಶಿಷ್ಟ ಜಾತಿ, ವರ್ಗ ಮತ್ತು ಹಿಂದುಳಿದ ಜಾತಿಗಳಿಗೆ ಸ್ಥಾನಗಳನ್ನು ಮೀಸಲಿಡಲು ನಿರ್ಧರಿಸಿದೆ. ಹಾಗೆಯೇ ಸಂವಿಧಾನದ 73ನೇ ತಿದ್ದುಪಡಿ ಪ್ರಕಾರ ಮಹಿಳೆಯರಿಗೆ ಶೇ. 33 ಸ್ಥಾನಗಳನ್ನು ಮೀಸಲಿಟಿದೆ. ಮೀಸಲಾತಿ ಅತಿ ಮುಖ್ಯ. ಏಕೆಂದರೆ ಅಧಿಕಾರ ಸಂಪತ್ತಿನೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ಅದಿಲ್ಲದಿದ್ದರೆ ಸಾಮಾನ್ಯ ಜನರು ಆಯ್ಕೆಯಾಗುವ ಸಾಧ್ಯತೆ ಬಹಳ ಕಡಿಮೆ.

ಉದ್ದೇಶ : ಅಧಿಕಾರ ಹಂಚಿಕೆ ಮತ್ತು ಮೀಸಲಾತಿಯ ನಿಜವಾದ ಅರ್ಥ ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ತಿಳಿಯುವಂತೆ ಮಾಡುವುದು, ಹಿಂದುಳಿದ ಜಾತಿ, ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಮೀಸಲಾತಿ ಏಕೆ ಅವಶ್ಯ ಎಂಬುದನ್ನು ಮಹಿಳಾ ಪ್ರತಿನಿಧಿಗಳಿಗೆ ಮನವರಿಕೆ ಮಾಡಿಕೊಡುವುದು.

*ಗುಂಪಿನ ಗಾತ್ರ :* 10-15 ಪ್ರತಿನಿಧಿಗಳು.

*ಸಮಯ :* 30-45 ನಿಮಿಷ

*ಸಂಯೋಜಕರು :* ಒಬ್ಬ ಅನುಭವಿ ತರಬೇತುದಾರರು.

*ಸ್ಥಳ :* ಒಂದು ದೊಡ್ಡ ಕೊಠಡಿ

*ಅವಶ್ಯಕ ಸಾಧನಗಳು :* ಒಂದು ಸೀಮೆಸುಣ್ಣ ಮತ್ತು ಸೀಟಿ

ಪ್ರಕ್ರಿಯೆ : *ಒಂದನೇ ಹಂತ :* ತರಬೇತುದಾರರು ಕೊಠಡಿಯಲ್ಲಿ ರಚಿಸಲಾಗಿರುವ ವೃತ್ತದ ಸುತ್ತ ನಿಂತುಕೊಳ್ಳುವಂತೆ ಶಿಬಿರಾರ್ಥಿಗಳಿಗೆ ಸೂಚಿಸಬೇಕು.

*ಎರಡನೇ ಹಂತ :* ಶಿಬಿರಾರ್ಥಿಗಳಿಗೆ ವೃತ್ತದ ಸುತ್ತ ಸುತ್ತುವಂತೆ ಹೇಳಲಾಗುತ್ತದೆ.

*ಮೂರನೇ ಹಂತ :* ಸಂಯೋಜಕರು ಸೀಟಿ ಊದಿದಾಗ ಶಿಬಿರಾರ್ಥಿ ವೃತ್ತದೊಳಕ್ಕೆ ಪ್ರವೇಶಿಸಬೇಕು. ಯಾರು ವೃತ್ತದಿಂದ ಹೊರಗುಳಿಯುತ್ತಾರೋ ಅವರು ಆಟದಿಂದ ಹೊರಬಿದ್ದಂತೆ.

ನಾಲ್ಕನೇ ಹಂತ : ಸಂಯೋಜಕರು ವೃತ್ತದ ಪರಿಧಿಯನ್ನು ಕಿರಿದುಗೊಳಿಸುತ್ತಾರೆ. ಮತ್ತೆ ಮೊದಲಿನಂತೆ ಶಿಬಿರಾರ್ಥಿ ಓಡಲಾರಂಭಿಸುತ್ತಾರೆ. ಪುನಃ ಸಂಯೋಜಕರು ಸೀಟಿ ಊದುತ್ತಿದ್ದಂತೆ ಮತ್ತೆ ವೃತ್ತ ಪ್ರವೇಶಿಸುತ್ತಾರೆ.

*ಐದನೇ ಹಂತ :* ಶಿಬಿರಾರ್ಥಿಗಳ ಸಂಖ್ಯೆ ಕಡಿಮೆಯಾದಂತೆ ವೃತ್ತದ ಗಾತ್ರ ಚಿಕ್ಕದಾಗುತ್ತ ಹೋಗುತ್ತದೆ.

ಆರನೇ ಹಂತ : ಅಂತಿಮವಾಗಿ ಆಟ ಯಾವ ಹಂತ ತಲುಪುತ್ತದೆಂದರೆ ವೃತ್ತದ ಗಾತ್ರ ಕೇವಲ ಒಬ್ಬರು ಮಾತ್ರ ನಿಲ್ಲುವಷ್ಟು ಚಿಕ್ಕದಾಗುತ್ತದೆ. ಕೊನೆಯಲ್ಲಿ ವೃತ್ತದಲ್ಲಿ ಉಳಿಯುವವರು ವಿಜಯಿಯಾಗುತ್ತಾರೆ. ನಂತರ ಚಿಕ್ಕವೃತ್ತದಲ್ಲಿ ಹೇಗಾದರೂ ಮಾಡು ಇಬ್ಬರು ನಿಲ್ಲಿ ಎಂದು ತರಬೇತಿದಾರರು ತಿಳಿಸುತ್ತಾರೆ. ಅದರಂತೆ ಒಬ್ಬರು ಶಿಬಿರಾರ್ಥಿಗಳ ಅನುಕೂಲ ಮಾಡಿಕೊಂಡು ನಿಲ್ಲುತ್ತಾರೆ.

**ತರಬೇತುದಾರರ ಪಾತ್ರ :** ವೃತ್ತದ ಆಟ ಕೊನೆಗೊಂಡು ನಂತರ ಮಧ್ಯ ಪ್ರವೇಶಿಸುವ ಸಂಯೋಜಕರು ಇದೇ ರೀತಿ ಪ್ರಯತ್ನಪೂರ್ವಕವಾಗಿ ಅಧಿಕಾರಗಳಿಸಬೇಕು ಎಂದು ವಿವರಿಸುವರು. ಮೀಸಲಾತಿ ಇದ್ದರೂ ಪ್ರಯತ್ನವಿಲ್ಲದೆ ಅಧಿಕಾರಗಳಿಸುವುದು ಸಾಧ್ಯವಿಲ್ಲ. ಮೀಸಲಾತಿ ಒಂದು ಮೆಟ್ಟಿಲು ಮಾತ್ರ. ಉಳಿದ ಮೆಟ್ಟಿಲು ಏರುವ ಪ್ರಯತ್ನ ಅಭ್ಯರ್ಥಿಗಳೇ ಮಾಡಬೇಕು ಎಂಬುದಾಗಿ ವಿವರಿಸುವರು.

**ಫಲಿತಾಂಶ :** ಸಹಕಾರ ಮನೋಭಾವದಿಂದ ಚಿಕ್ಕ ವೃತ್ತವಾದರೂ ಹೆಚ್ಚು ಮಂದಿ ಪ್ರತಿನಿಧಿಗಳು ಪರಸ್ಪರ ಸಹಕರಿಸಿ ನಿಂತುಕೊಂಡು, ಅಧಿಕಾರವನ್ನು ಹಂಚಿಕೊಳ್ಳಬೇಕೆಂದು ಸಂಯೋಜಕರು ಶಿಬಿರಾರ್ಥಿಗಳಿಗೆ ಸಲಹೆ ನೀಡುವರು.

**ಟಿಪ್ಪಣಿಗೆ ಜಾಗ**



# ಕಲ್ಲು ಹೆಕ್ಕುವ ಆಟ

ನಮ್ಮಲ್ಲಿ ಸಾಂಪ್ರದಾಯಿಕವಾಗಿ ಅಧಿಕಾರ ಮೇಲ್ಜಾತಿಯವರ ಅದರಲ್ಲೂ ಪುರುಷರ ಕೈಯಲ್ಲೇ ಉಳಿದುಕೊಂಡು ಬಂದಿದೆ. ಆದ್ದರಿಂದ ಅಲ್ಪಸಂಖ್ಯಾತರು ತುಳಿತಕ್ಕೊಳಗಾಗಿದ್ದಾರೆ, ಧ್ವನಿ ಇಲ್ಲದಂತಾಗಿದ್ದಾರೆ. ಆದರೆ ಪಂಚಾಯತಿ ವ್ಯವಸ್ಥೆ ಸಮುದಾಯದ ಸಮಸ್ಯೆಗಳತ್ತ ಬೆಳಕು ಚೆಲ್ಲುತ್ತದೆ ಹಾಗೂ ಅದು ಪ್ರತಿನಿಧಿಗಳಿಗೆ ಹೆಚ್ಚು ಅಧಿಕಾರ ನೀಡುವುದರಿಂದ ವಿವಿಧ ಜಾತಿಯ ಪುರುಷ ಮತ್ತು ಮಹಿಳೆಯರಿಗೆ ಅದರಲ್ಲಿ ಪ್ರಾತಿನಿಧ್ಯ ನೀಡುವುದು ಅವಶ್ಯ. ಇದನ್ನು 1992ರ ಪಂಚಾಯತಿ ರಾಜ್ ಕಾಯಿದೆಯಲ್ಲೂ ಉಲ್ಲೇಖಿಸಲಾಗಿದೆ.

*ವಿಷಯ :* ಸಾಮಾಜಿಕ ವಿಶ್ಲೇಷಣೆ

*ಉದ್ದೇಶ :* ತಮ್ಮ ಸಾಮರ್ಥ್ಯವನ್ನು ಬಳಸಿ ಹೇಗೆ ಅಧಿಕಾರವನ್ನು ಪಡೆಯಬಹುದು ಎಂಬುದನ್ನು ಮಹಿಳಾ ಪ್ರತಿನಿಧಿಗಳಿಗೆ ತಿಳಿಸಿಕೊಡುವುದು. ಲಿಂಗ ಮತ್ತು ಜಾತಿ ಆಧಾರಿತ ತಾರತಮ್ಯವಿಲ್ಲದೆ ಅಧಿಕಾರವನ್ನು ಹಂಚಿಕೊಳ್ಳಬೇಕೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡುವುದು.

*ಗುಂಪಿನ ಗಾತ್ರ :* 10-15 ಪ್ರತಿನಿಧಿಗಳು

*ಸಮಯ :* 30 ನಿಮಿಷ

*ಸಂಯೋಜಕ :* ಒಬ್ಬ ಅನುಭವಿ ತರಬೇತುದಾರರು

*ಸ್ಥಳ :* ಒಂದು ಕೊಠಡಿ

ಅವಶ್ಯಕ ಸಾಧನಗಳು : ಕಲ್ಲುಗಳು

ಪ್ರಕ್ರಿಯೆ :

*ಒಂದನೇ ಹಂತ :* ತರಬೇತುದಾರರು ಕಲ್ಲುಗಳನ್ನು ಎಸೆದು ತಮಗೆ ಸಾಧ್ಯವಾದಷ್ಟು ಕಲ್ಲುಗಳನ್ನು ಹೆಕ್ಕುವಂತೆ ಶಿಬಿರಾರ್ಥಿಗಳಿಗೆ ತಿಳಿಸುವರು.

*ಎರಡನೇ ಹಂತ :* ಕೆಲವರು ಗರಿಷ್ಠ ಸಂಖ್ಯೆಯ ಕಲ್ಲುಗಳನ್ನು ಹೆಕ್ಕಿದರೆ, ನಾಚಿಕೆ ಸ್ವಭಾವದವರು ಅಥವಾ ನಿಧಾನ ಸ್ವಭಾವದವರು ಕೆಲವೇ ಕಲ್ಲುಗಳನ್ನು ಹೆಕ್ಕುತ್ತಾರೆ. ಕೆಲವರು ಹೆಚ್ಚು ಕಲ್ಲುಗಳನ್ನು ಹೆಕ್ಕುತ್ತಾರೆ.

*ಮೂರನೇ ಹಂತ :* ಸಂಯೋಜಕರು ಹೆಚ್ಚು ಕಲ್ಲು ಹೆಕ್ಕಿದವರು ಕಲ್ಲುಗಳ ಸಂಖ್ಯೆ ಸಮನಾಗುವಂತೆ ಕಡಿಮೆ ಕಲ್ಲು ಹೆಕ್ಕಿದವರಿಗೆ ನೀಡುವಂತೆ ಸೂಚಿಸುವರು.

ತರಬೇತುದಾರರ ಪಾತ್ರ :

ಹೆಚ್ಚು ಕಲ್ಲುಗಳನ್ನು ಹೆಕ್ಕಿದವರು ಹೆಚ್ಚಿನ ಕಲ್ಲುಗಳನ್ನು ಇತರರೊಂದಿಗೆ ಸಮನಾಗಿ ಹಂಚಿಕೊಳ್ಳುವರೇ ಇಲ್ಲವೇ ಎನ್ನುವುದನ್ನು ಆಧರಿಸಿ ಚುನಾಯಿತ

ಮಹಿಳಾ ಪ್ರತಿನಿಧಿ ಅಧಿಕಾರ ಹಂಚಿಕೊಳ್ಳಲು ಸಿದ್ಧಳಿರಬೇಕು ಎಂಬುದನ್ನು ತರಬೇತುದಾರರು ಮನದಟ್ಟು ಮಾಡಿಕೊಡಬೇಕು. ಹಾಗೆಯೇ ಹೇಗೆ ಕೆಲವರು ಹೆಚ್ಚು ಕಲ್ಲುಗಳನ್ನು ಹೊಂದಲು ಬಯಸುತ್ತಾರೆ ಎಂಬುದನ್ನು ಗಮನಿಸಲು ಹೇಳಬೇಕು. ಇದು ಪ್ರತಿನಿಧಿಯ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗೆ ಸಂಬಂಧಿಸಿದೆ.

**ಫಲಿತಾಂಶ :** ಈ ಆಟದ ಮೂಲಕ ಚುನಾಯಿತ ಮಹಿಳಾ ಪ್ರತಿನಿಧಿಗಳು ಸಮಾಜದಲ್ಲಿರುವ ಅಸಮಾನತೆಯನ್ನು ವಿಶ್ಲೇಷಿಸುವಲ್ಲಿ ಯಶಸ್ವಿಯಾಗುತ್ತಾರೆ. ಹಾಗೆಯೇ ಅಧಿಕಾರ ಎಲ್ಲರಿಗೂ ಸಿಗಬೇಕು, ಅದು ಯಾರೊಬ್ಬರ ಸ್ವತ್ತೂ ಅಲ್ಲ ಎಂಬುದನ್ನೂ ಅರಿಯುತ್ತಾರೆ.

**ಟಿಪ್ಪಣಿಗೆ ಜಾಗ**



## ಮಾದರಿ ಗ್ರಾಮಪಂಚಾಯಿತಿಗೆ ದಾರಿ ಹಾವು-ಏಣಿ ಆಟದ ತಂತ್ರ :

ಇತ್ತೀಚಿನ ವರ್ಷಗಳಲ್ಲಿ ಬೇರುಮಟ್ಟದಲ್ಲಿ ಮಹಿಳೆಯರು ಅಧಿಕಾರ ಪಡೆಯುವಲ್ಲಿ ಪಂಚಾಯಿತಿ ರಾಜ್ ವ್ಯವಸ್ಥೆ ಒಂದು ಏಣಿಯಂತೆ ಕೆಲಸ ಮಾಡುತ್ತಿದೆ. ಪಂಚಾಯಿತಿ ರಾಜ್ ಸಂಸ್ಥೆಗಳು ಮಹಿಳೆಯರು ತಮ್ಮ ಜವಾಬ್ದಾರಿಯನ್ನು ಗುರುತಿಸಿ ಅರ್ಥೈಸಿಕೊಳ್ಳಲು, ದೈನಂದಿನ ಆಗುಹೋಗುಗಳಲ್ಲಿ ಸಮಾಜದ ಇತರರೊಂದಿಗೆ ಗುರುತಿಸಿಕೊಳ್ಳಲು ಅವರಿಗೆ ನೆರವಾಗುತ್ತಿವೆ.

ವಿಷಯ : ಪ್ರತನಿಧಿಗಳು ಭ್ರಷ್ಟರಾದರೆ ಜನಪ್ರಿಯತೆ ಕುಂದುತ್ತದೆ.

**ಉದ್ದೇಶ :** ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ತಮ್ಮ ಪಾತ್ರ ಏನು ಎಂಬುದನ್ನು ಅರಿತುಕೊಳ್ಳಲು ಮಹಿಳಾ ಪ್ರತಿನಿಧಿಗಳಿಗೆ ಸಹಾಯ ಮಾಡುವುದು.

**ಗುಂಪಿನ ಗಾತ್ರ :** ಕನಿಷ್ಠ ಇಬ್ಬರು ಮತ್ತು ಗರಿಷ್ಠ ನಾಲ್ವರು.

**ಸಮಯ :** 30 ನಿಮಿಷ

**ಸಂಯೋಜಕರು :** ಒಬ್ಬ ಅನುಭವಿ ತರಬೇತುದಾರರು.

**ಸ್ಥಳ :** ಒಂದು ಕೊಠಡಿ

ಬೇಕಾಗುವ ವಸ್ತುಗಳು : ಒಂದು ಹಾವು-ಏಣಿ ಆಟದ ಪಟ, ದಾಳ ಮತ್ತು ಬೇರೆ ಬೇರೆ ಬಣ್ಣದ ಕಾಯಿಗಳು.

**ಪ್ರಕ್ರಿಯೆ :**



*ಒಂದನೇ ಹಂತ :* ಶಿಬಿರಾರ್ಥಿಗಳಿಗೆ ತರಬೇತುದಾರರು ಆಟದ ಬಗ್ಗೆ ನಿರ್ದೇಶನ ನೀಡುವರು. ದಾಳ ಉರುಳಿಸುವ ಮೂಲಕ ಪ್ರತಿ ಗುಂಪು ಅಥವಾ ಆಟಗಾರ ಆಟವನ್ನಾರಂಭಿಸುತ್ತಾರೆ. ದಾಳ ತೋರಿಸುವ ಸಂಖ್ಯೆ ಹಾವಿನ ಮುಖವಿರುವ ಮನೆಗೆ ಬಂದು ನಿಂತರೆ ಆ ಸ್ಪರ್ಧಿ ಹಾವಿನಿಂದ ಕಚ್ಚಲ್ಪಟ್ಟು ಬಾಲದ ತುದಿಯ ಮನೆಗೆ ಬಂದು ಬೀಳುತ್ತಾನೆ. ಅದೇ ದಾಳದ ಸಂಖ್ಯೆ ಏಣಿಯ ಬುಡದ ಮನೆಗೆ ಬಿದ್ದರೆ ಸ್ಪರ್ಧಿ ಏಣಿಯ ಮೇಲೇರುವದೇ ಅಲ್ಲದೆ ಮತ್ತೊಂದು ಆಟ ಆಡುವ ಅವಕಾಶ ಪಡೆಯುತ್ತಾನೆ. ತರಬೇತುದಾರರು ಆಟದ ಮುಖ್ಯ ಉದ್ದೇಶವನ್ನು ವಿವರಿಸುವರು. ಏಣಿಯನ್ನು ಮಾದರಿ ಗ್ರಾಮಪಂಚಾಯಿತಿ ಆಡಳಿತಕ್ಕೂ, ಹಾವನ್ನು ಅಧಿಕಾರ ದುರುಪಯೋಗಕ್ಕೂ ಹೋಲಿಸುವರು.

*ಎರಡನೇ ಹಂತ :* ಮೊದಲ ಸ್ಪರ್ಧಿ ದಾಳ ಉರುಳಿಸಿದಾಗ ಅದು ಎರಡು ಅಂಕೆ ತೋರಿಸುತ್ತದೆ. ಅದರಂತೆ ಆಕೆ ತನ್ನ ಕಾಯಿಯನ್ನು ಎರಡು ಮನೆ ನಡೆಸುವುದರ ಮೂಲಕ ಆಟ ಪ್ರಾರಂಭಿಸುತ್ತಾರೆ. ಅಂದರೆ ರಾಜಕೀಯಕ್ಕೆ ಪಾದಾರ್ಪಣೆ ಮಾಡುತ್ತಾರೆ.

*ಮೂರನೇ ಹಂತ :* ಎರಡನೇ ಸ್ಪರ್ಧಿ ಉರುಳಿಸುವ ದಾಳ ಐದು ಅಂಕಿ ತೋರಿಸುತ್ತದೆ. ಅದರಂತೆ ಆಕೆ ತನ್ನ ಕಾಯಿಯನ್ನು ಐದು ಮನೆ ನಡೆಸುತ್ತಾಳೆ.

ಪಂಚಾಯಿತಿಯ ಅಧಿಕಾರ ಮತ್ತು ಕರ್ತವ್ಯಗಳನ್ನು ಬಳಸಿ ಬಡತನ ನಿರ್ಮೂಲನೆ ಯೋಜನೆ ಹಮ್ಮಿಕೊಂಡು ಬಡವರಿಗೆ ಸಹಾಯ ಮಾಡಬೇಕೆಂಬ ಸಂದೇಶವನ್ನು ಇದು ನೀಡುತ್ತದೆ.

***ನಾಲ್ಕನೇ ಹಂತ :*** ಮೂರನೇ ಸ್ಪರ್ಧಿಗೆ ಅದೃಷ್ಟವಶಾತ್ ಮೊದಲ ದಾಳದಲ್ಲೇ 3 ಅಂಕಿ ಬಿದ್ದು ಏಣಿ ಹತ್ತುವ ಅವಕಾಶ ಸಿಗುತ್ತದೆ. ಇದರಿಂದ ಆಕೆಗೆ ಎರಡನೇ ಅವಕಾಶ ದೊರೆತು, ಅಲ್ಲಿ ಐದು ಅಂಕ ಬೀಳುತ್ತದೆ. ಅದರಂತೆ ಆಕೆ ತನ್ನ ಕಾಯಿಯನ್ನು ಐದು ಮನೆ ನಡೆಸುತ್ತಾಳೆ. ಪಂಚಾಯಿತಿಯ ವಿವಿಧ ಕೆಲಸಕಾರ್ಯಗಳನ್ನು ಮತ್ತು ಅಧಿಕಾರಗಳನ್ನು ನಡೆಸಿಕೊಂಡು ಹೋಗಲು, ವಿವಿಧ ಅಧಿಕಾರಿಗಳ ನಡುವೆ ಕಾರ್ಯ ಸಾಧು ಸಂಬಂಧ ಇರಬೇಕು ಎಂಬ ಸಂದೇಶ ಇದರಲ್ಲಿದೆ.

***ಐದನೇ ಹಂತ :*** ಇದೇ ರೀತಿ ಎಲ್ಲ ಸ್ಪರ್ಧಿಗಳು ತಮ್ಮ ಮೊದಲನೇ ಸುತ್ತು ಮುಗಿಸಿ, ತಮ್ಮ ಕಾಯಿ ಪಟದ ಕೊನೆಯ ಮನೆ ತಲುಪುವವರೆಗೆ ಆಟ ಮುಂದುವರಿಸುತ್ತಾರೆ.

**ತರಬೇತುದಾರರ ಪಾತ್ರ :** ಆಟದ ಸಂದೇಶವನ್ನು, ಸರಕಾರಿ ಯೋಜನೆಗಳನ್ನು ಜಾರಿಗೊಳಿಸುವಾಗ ಜನರಿಗೆ ಯಾವ ರೀತಿ ಸಹಾಯ ಮಾಡಬಹುದೆಂಬುದನ್ನು ಮತ್ತು ಪಂಚಾಯಿತಿಗಳು ಸುಲಲಿತವಾಗಿ ಕೆಲಸ ನಿರ್ವಹಿಸಿಕೊಂಡು ಹೋಗುವ ಬಗೆಯನ್ನು ಸಂಯೋಜಕರು ಶಿಬಿರಾರ್ಥಿಗಳಿಗೆ ವಿವರಿಸುತ್ತಾರೆ. ಕೊನೆಯಲ್ಲಿ ಭ್ರಷ್ಟರಾಗದಂತೆ ಮತ್ತು ಕೆಲಸದಲ್ಲಿ ನಿರ್ಲಕ್ಷ್ಯ ತೋರದಂತೆ ಮಹಿಳಾ ಪ್ರತಿನಿಧಿಗಳನ್ನು ತರಬೇತುದಾರರು ಎಚ್ಚರಿಸುತ್ತಾರೆ. ಹಾಗೆ ಮಾಡುವುದು ಅವರ ವ್ಯಕ್ತಿತ್ವವನ್ನು ತೋರಿಸುತ್ತದೆ, ಜನಪ್ರಿಯತೆ ಕುಂದುತ್ತದೆ' ಎಂದೂ ಎಚ್ಚರಿಸುತ್ತಾರೆ.

**ಫಲಿತಾಂಶ :** ಈ ಆಟ ಕುರಿತು ಶಿಬಿರಾರ್ಥಿಗಳ ಪ್ರತಿಕ್ರಿಯೆ ಕೇಳಿದಾಗ, ಎಲ್ಲರೂ ತಮ್ಮ ಸಂತೋಷ ವ್ಯಕ್ತಪಡಿಸುತ್ತಾರೆ. ಇಲ್ಲಿ ಮನರಂಜನೆ ಮೂಲಕ ಮಾದರಿ ಪಂಚಾಯಿತಿ ಕಾರ್ಯವೈಖರಿ ಕುರಿತಂತೆ ಕೆಲವೊಂದು ಉತ್ತಮ ಸಂದೇಶಗಳು ಅವರಿಗೆ ಸಿಕ್ಕಿವೆ.

**ಟಿಪ್ಪಣಿಗೆ ಜಾಗ**

# ಮೂಕಾಭಿನಯ

ಮೂಕಾಭಿನಯ ಎಂಬುದು ಒಂದು ವಿಶಿಷ್ಟ ಆಟವಾಗಿದ್ದು, ಇದರಲ್ಲಿ ಮೌನ ಕ್ರಿಯೆಗಳ ಮೂಲಕ ಮಾತನಾಡಲಾಗುತ್ತದೆ. ಇಲ್ಲಿ ಗ್ರಾಮದ ಸಮಸ್ಯೆಗಳನ್ನು ಮಾತಿಲ್ಲದೆ, ಸರಳವಾಗಿ ಮತ್ತು ಎಲ್ಲರಿಗೂ ಅರ್ಥವಾಗುವಂತ ಕ್ರಿಯೆಗಳ ಮೂಲಕ ವ್ಯಕ್ತಪಡಿಸಲಾಗುತ್ತದೆ.

*ಉದ್ದೇಶ :* ಜನರಿಗೆ ಅಧಿಕಾರ ವಿಕೇಂದ್ರೀಕರಣದ ಶಕ್ತಿ ಬಗ್ಗೆ ಹಾಗೆಯೇ ಗ್ರಾಮಸಭೆ ಮತ್ತು ಪಂಚಾಯಿತಿಗಳ ವಿವಿಧ ನಿರ್ಧಾರ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗವಹಿಸುವುದನ್ನು ಕಲಿಸುವುದು.

*ಗುಂಪಿನ ಗಾತ್ರ :* 20 ರಿಂದ 25

*ಸಮಯ :* 30 ರಿಂದ 45 ನಿಮಿಷ

*ಸಂಯೋಜಕರು :* ಒಬ್ಬ ಅನುಭವಿ ತರಬೇತುದಾರರು

*ಸ್ಥಳ :* ಒಂದು ಕೊಠಡಿ

*ಬೇಕಾಗುವ ವಸ್ತುಗಳು :* ಒಂದು ಹಗ್ಗ

ಪ್ರಕ್ರಿಯೆ :

*ಒಂದನೇ ಹಂತ :* ತರಬೇತುದಾರರು ಸ್ಪರ್ಧಿಗಳಿಗೆ ಆಟದ ಕ್ರಮವನ್ನು ವಿವರಿಸುತ್ತಾರೆ. ಸ್ಪರ್ಧಿ/ಶಿಬಿರಾರ್ಥಿಗಳ ಪೈಕಿ ಒಬ್ಬರು ಅಧಿಕಾರವನ್ನು ತನ್ನ ಕೈಯಲ್ಲಿಟ್ಟುಕೊಂಡಿರುವ ಊರ ಪ್ರಮುಖ ಗೌಡನ ಪಾತ್ರ ನಿರ್ವಹಿಸುತ್ತಾರೆ. ಉಳಿದವರು ಗೌಡನ ಆಜ್ಞೆಗೆ ತಲೆಬಾಗುವ ಗುಲಾಮರ ಪಾತ್ರ ನಿರ್ವಹಿಸುತ್ತಾರೆ. ಸಂಪೂರ್ಣ ಅಧಿಕಾರ ಗೌಡನ ಕೈಯಲ್ಲಿ ಕೇಂದ್ರೀಕೃತವಾಗಿದ್ದು, ಉಳಿದವರ ಮಾತಿಗೆ ಯಾವುದೇ ಬೆಲೆ ಇರುವುದಿಲ್ಲ.



*ಎರಡನೇ ಹಂತ :* ಎಲ್ಲ ಕೆಲಸಗಾರರ ಕೈಗಳಿಗೆ ಒಂದೊಂದು ಹಗ್ಗ ಕಟ್ಟಿದ್ದು, ಹಗ್ಗದ ಇನ್ನೊಂದು ತುದಿಯನ್ನು ಗೌಡನ ಹಿಡಿದುಕೊಂಡು ಅವರನ್ನು ನಿಯಂತ್ರಿಸುತ್ತಿರುತ್ತಾನೆ.

*ಮೂರನೇ ಹಂತ :* ಒಬ್ಬ ಸಮಾಜ ಕಾರ್ಯಕರ್ತರು ಊರಿಗೆ ಪ್ರವೇಶಿಸುತ್ತಾರೆ. ಅವರು ಗೌಡನ ಹಿಡಿತದಿಂದ ಜನರನ್ನು ಬಿಡುಗಡೆಗೊಳಿಸಲು ಯತ್ನಿಸುತ್ತಾರೆ. ಆದರೆ ಹಳೆಯ ನಂಬಿಕೆ ಮತ್ತು ಸಂಪ್ರದಾಯಕ್ಕೆ ಜೋತು ಬಿದ್ದಿರುವ ಗ್ರಾಮಸ್ಥರು ಸಮಾಜ ಕಾರ್ಯಕರ್ತರ ಬುದ್ಧಿವಾದವನ್ನು ತಿರಸ್ಕರಿಸುತ್ತಾರೆ.

*ನಾಲ್ಕನೇ ಹಂತ :* ಆದರೆ ಗ್ರಾಮಸ್ಥರಿಂದ ತಿರಸ್ಕರಿಸಲ್ಪಟ್ಟ ಸಮಾಜ ಕಾರ್ಯಕರ್ತರು ತನ್ನ ಕರ್ತವ್ಯದಿಂದ ವಿಮುಖರಾಗುವುದಿಲ್ಲ. ಬದಲಾಗಿ ಗ್ರಾಮಸ್ಥರನ್ನು ಸುಶಿಕ್ಷಿತರನ್ನಾಗಿಸುವ ಉದ್ದೇಶದಿಂದ ಮತ್ತೆ ಮತ್ತೆ ಹಳ್ಳಿಗೆ ಭೇಟಿ ನೀಡುತ್ತಾರೆ.

ಐದನೇ ಹಂತ : ಕ್ರಮೇಣ ಪ್ರತಿಯೊಬ್ಬ ಗ್ರಾಮಸ್ಥನೂ ಗೌಡನ ಹಿಡಿತದಿಂದ ಹೊರಬರುತ್ತಾನೆ. ಸ್ಥಳೀಯ ಸ್ವಯಂ ಆಡಳಿತದಲ್ಲಿ ತಮ್ಮ ಪಾತ್ರವೇನು ಎಂಬುದನ್ನು ಅರಿತುಕೊಳ್ಳುತ್ತಾರೆ.

**ತರಬೇತುದಾರರ ಪಾತ್ರ :** ತರಬೇತುದಾರರು ಮೂಕಾಭಿನಯದ ವೀಕ್ಷಕ ವಿವರಣೆ ನೀಡಬೇಕು ಮತ್ತು ಅದನ್ನು ಗ್ರಾಮದ ಪರಿಸ್ಥಿತಿಗೆ ಹೋಲಿಸಬೇಕು.

**ಫಲಿತಾಂಶ :** ಹಳ್ಳಿಯ ಮುಖಂಡನಿಂದ ಆಳಲ್ಪಡುವ ಹಳೆಯದ ಪದ್ಧತಿ ಜನತೆಗೆ ಅಧಿಕಾರ ವಿಕೇಂದ್ರೀಕರಣದ ನಿಜವಾದ ಶಕ್ತಿ ತಿಳಿದಾಗ ಅವರು ಪ್ರಜಾಪ್ರಭುತ್ವದ ಫಲವನ್ನು ಸವಿಯುವಲ್ಲಿ ಯಶಸಾಧಿಸುತ್ತಾರೆ.

**ಟಿಪ್ಪಣಿಗೆ ಜಾಗ**

# ಗೊಂಬೆಯಾಟ

ಗೊಂಬೆಯಾಟವನ್ನು ಮುಖ್ಯವಾಗಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮಸಭೆ ಮತ್ತು ಗ್ರಾಮ ಪಂಚಾಯಿತಿ ಸಭೆಗಳ ವಿಧಗಳನ್ನು ಪರಿಚಯಿಸಲು ಬಳಸಲಾಗುತ್ತದೆ. ಗೊಂಬೆಗಳು ಗ್ರಾಮ ಪಂಚಾಯಿತಿಯ ಪ್ರಕ್ರಿಯೆಗಳನ್ನು ಆರಾಮವಾಗಿ ಮತ್ತು ಮನರಂಜನೆಯೊಂದಿಗೆ ಸಂಯೋಜಿಸಿ ತಿಳಿಸಿಕೊಡುತ್ತವೆ. ಗೊಂಬೆಯಾಟದ ತಂತ್ರವನ್ನು ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಪರಿಣಾಮಕಾರಿ ತರಬೇತಿ ನೀಡಲು ಬಳಸಬಹುದಾಗಿದೆ.

*ವಿಷಯ :* ಗ್ರಾಮ ಪಂಚಾಯಿತಿ ಸಭೆಗಳು

*ಉದ್ದೇಶ :* ಮನರಂಜನೆ ಮೂಲಕ ಮಹಿಳಾ ಪ್ರತಿನಿಧಿಗಳಿಗೆ ಗ್ರಾಮಪಂಚಾಯಿತಿ ಪ್ರಕ್ರಿಯೆಯನ್ನು ತಿಳಿಸಿಕೊಡುವುದು.

*ಗುಂಪಿನ ಗಾತ್ರ :* 20-25 ಪ್ರತಿನಿಧಿಗಳು

*ಸಮಯ :* 45 ನಿಮಿಷಗಳು

ಸಂಯೋಜಕರು : ಒಬ್ಬ ಅನುಭವಿ ತರಬೇತುದಾರರು.

*ಸ್ಥಳ :* ಒಂದು ಕೊಠಡಿ

*ಬೇಕಾಗುವ ಸಾಧನಗಳು :* ಕೈಗೊಂಬೆಗಳು, ಒಂದು ಪರದೆ, ಕೈ ಗೊಂಬೆಯಾಟದಲ್ಲಿ ನಿಪುಣರಾಗಿರುವ ಇಬ್ಬರು ತರಬೇತಿದಾರರು.

**ಪ್ರಕ್ರಿಯೆ :**

**ಒಂದನೇ ಹಂತ :** ಈ ಪ್ರಕ್ರಿಯೆ ಪ್ರಾರಂಭಿಸುವ ಮೊದಲು ತರಬೇತುದಾರರು ಕೆಲವು ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳುವರು. ನಂತರ ಎಲ್ಲಾ ಶಿಬಿರಾರ್ಥಿಗಳನ್ನು ಕರೆದು ಗುಂಪಾಗಿ ಕುಳಿತುಕೊಳ್ಳುವಂತೆ ಸೂಚಿಸುವರು.

*ಎರಡನೇ ಹಂತ :* ಸಂಯೋಜಕರು ಪ್ರತಿನಿಧಿಗಳ ಎದುರು ಒಂದು ಪರದೆಯನ್ನು ಅಡ್ಡವಾಗಿ ಹಿಡಿಯುತ್ತಾರೆ. ನಂತರ ಪರದೆ ಹಿಂದಿನಿಂದ ಗ್ರಾಮಸ್ಥ 'ಸಿದ್ಧಣ್ಣ'ನ ಪಾತ್ರ ನಿರ್ವಹಿಸುವ ಗೊಂಬೆಯೊಂದು ಪ್ರತ್ಯಕ್ಷವಾಗುತ್ತದೆ. ಸಿದ್ಧಣ್ಣ ಗುಂಪನ್ನು ನೋಡಿ 'ಹಲೋ... ಹೇಗಿದ್ದೀರಿ?' ಎಂದು ಕೇಳುತ್ತಾನೆ. ಇದನ್ನು ಕೇಳಿ ಅನೇಕ ಶಿಬಿರಾರ್ಥಿಗಳಿಗೆ ಅಚ್ಚರಿಯಾಗುತ್ತದೆ. ಕೆಲವರಿಗೆ ನಾಚಿಕೆಯೂ ಉಂಟಾಗುತ್ತದೆ.

*ಮೂರನೇ ಹಂತ :* ಚುನಾಯಿತ ಮಹಿಳಾ ಪ್ರತಿನಿಧಿಯ ಪಾತ್ರ ನಿರ್ವಹಿಸುವ ಗೊಂಬೆ ಗ್ರಾಮ ಪಂಚಾಯಿತಿಯತ್ತ ಹೋಗುತ್ತಿರುತ್ತದೆ. ಸಿದ್ದಣ್ಣ ಆ ಪ್ರತಿನಿಧಿಯನ್ನು ಪ್ರಶ್ನಿಸುತಾನೆ.

*ಸಿದ್ಧಣ್ಣ :* ಏನು ಪಾರ್ವತಮ್ಮ, ತುಂಬಾ ಗಡಿಬಿಡಿಯಲ್ಲಿದ್ದೀರಿ? ಏನು ಸಮಾಚಾರ?

*ಪಾರ್ವತಮ್ಮ :* ನಮಸ್ಕಾರ ಸಿದ್ಧಣ್ಣ. ನಾನು ಗಡಿಬಿಡಿಯಲ್ಲಿರುವುದು ನಿಜ. ನಾನೊಂದು ತುರ್ತು ಸಭೆಯಲ್ಲಿ ಭಾಗವಹಿಸಬೇಕಾಗಿದೆ. ನನಗೆ ಈಗಷ್ಟೇ ಸುದ್ದಿ ತಿಳಿಯಿತು. ನಾನು ಬೇಗ ಹೋಗಬೇಕಿದೆ.



*ಸಿದ್ಧಣ್ಣ :* ಹಾಗಾ? ನಿಮಗೆ ಮೊದಲೇ ತಿಳಿಸಬೇಕಿತ್ತು. ಅವರು ಅದು ಹೇಗೆ ಕೊನೆ ಕ್ಷಣದಲ್ಲಿ ನಿಮಗೆ ಸುದ್ದಿ ತಿಳಿಸಿದರು?

*ಪಾರ್ವತಮ್ಮ :* ಹೌದು. ಇದು ನನಗರ್ಥವಾಗುತ್ತದೆ, ಆದರೆ ನೋಡಿ, ಇದೊಂದು ತುರ್ತುಸಭೆ. ಇದಕ್ಕೆ ನಿಯಮಗಳು ಅನ್ವಯವಾಗುವುದಿಲ್ಲ.

*ಸಿದ್ಧಣ್ಣ :* ಹಾಗೇನು? ನಿಮ್ಮ ಮಾತಿನ ಅರ್ಥ ಬೇರೆ ಬೇರೆ ರೀತಿಯ ಪಂಚಾಯಿತಿ ಸಭೆಗಳಿರುತ್ತವೆನ್ನಿ? ಹಾಗಾದರೆ ಎಷ್ಟು ರೀತಿಯ ಸಭೆಗಳಿವೆ? ದಯವಿಟ್ಟು ನನಗೆ ವಿವರವಾಗಿ ತಿಳಿಸಿ.

*ಪಾರ್ವತಮ್ಮ :* ಸರಿ. ನಾನೀಗ ಗಡಿಬಿಡಿಯಲ್ಲಿದ್ದೇನೆ. ಆದ್ದರಿಂದ ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ನೋಡಿ ಸಿದ್ಧಣ್ಣ, ಪಂಚಾಯಿತಿ ಸಭೆಯಲ್ಲಿ ಸಾಮಾನ್ಯ ಸಭೆ, ವಿಶೇಷ ಸಭೆ ಮತ್ತು ತುರ್ತುಸಭೆ ಎಂಬ ಮೂರು ವಿಧಗಳಿವೆ. ನೀವು ಹೇಳಿದಂತೆ ಸಾಮಾನ್ಯ ಸಭೆಗಳಿಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಸಭೆ ನಡೆಯುವ ಏಳು ದಿನ ಮುಂಚಿತವಾಗಿ ಸಭೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ತಿಳಿಸಿ ಸೂಚನೆ ನೀಡಬೇಕು. ವಿಶೇಷ ಸಭೆಗಳಾದರೆ ಕಾರ್ಯದರ್ಶಿ ಮೂರು ದಿನ ಮುಂಚಿತವಾಗಿ ತಿಳಿಸಬೇಕು ಮತ್ತು ಆ ಸೂಚನೆಯನ್ನು ಸೂಚನಾ ಫಲಕದಲ್ಲಿ ಅಂಟಿಸಬೇಕು. ಆದರೆ ತುರ್ತು ಸಭೆಗಳಿಗೆ ಈ ಎಲ್ಲಾ ನಿಯಮಗಳು ಅನ್ವಯವಾಗುವುದಿಲ್ಲ.

*ಸಿದ್ಧಣ್ಣ :* ಈಗ ನನಗೆ ಗ್ರಾಮಪಂಚಾಯಿತಿ ಸಭೆಗಳ ಕುರಿತು ಚೆನ್ನಾಗಿ ಅರ್ಥವಾಯಿತು. ಆದರೆ ನಾಲ್ಕೈದು ಸದಸ್ಯರು ಇಂದಿನ ಸಭೆಯಲ್ಲಿ ಭಾಗವಹಿಸುತ್ತಿಲ್ಲ ಎಂಬುದಾಗಿ ಕೇಳಿದೆ.

*ಪಾರ್ವತಮ್ಮ :* ಅಂಥಾ ಸಂದರ್ಭದಲ್ಲಿ ನಾವು ಅಗತ್ಯ ಕೋರಂಗಾಗಿ 30 ನಿಮಿಷಗಳವರೆಗೆ ಕಾಯುತ್ತೇವೆ. ಆದರೂ ಅಗತ್ಯ ಸಂಖ್ಯೆಯ ಸದಸ್ಯರು ಬರದಿದ್ದರೆ ಸಭೆಯನ್ನು ಮರುದಿನಕ್ಕೆ ಮುಂದೂಡುತ್ತೇವೆ.

*ಸಿದ್ಧಣ್ಣ :* ಒಂದು ನಿಮಿಷ, ನೀವು 'ಕೋರಂ' ಎಂಬ ಒಂದು ಪದವನ್ನು ಬಳಸಿದಿರಿ, ಅದರ ಅರ್ಥವೇನು?

*ಪಾರ್ವತಮ್ಮ :* ಸಿದ್ಧಣ್ಣ, ಯಾವಾಗ ಗ್ರಾಮ ಪಂಚಾಯಿತಿ ಸಭೆ ನಡೆಸಬೇಕಾದರೂ ಅಲ್ಲಿ ಅಗತ್ಯ 'ಕೋರಂ' ಅಂದರೆ ಪಂಚಾಯಿತಿಯ ಒಟ್ಟು ಸದಸ್ಯರ ಮೂರನೇ ಒಂದು ಭಾಗ ಸದಸ್ಯರು ಹಾಜರಿರಬೇಕಾಗುತ್ತದೆ. ಇಲ್ಲದಿದ್ದರೆ ಅಧ್ಯಕ್ಷರು ಮತ್ತು ಸದಸ್ಯರು 'ಕೋರಂ' ಭರ್ತಿಯಾಗಬಹುದೆಂದು ಅರ್ಧ ತಾಸು ಕಾಯುತ್ತಾರೆ. ಆಗಲೂ ಕೋರಂ ಭರ್ತಿಯಾಗದಿದ್ದರೆ ಸಭೆಯನ್ನು ಮರುದಿನಕ್ಕೆ ಅಥವಾ ಮುಂದಿನ ಯಾವುದಾದರೂ ದಿನಾಂಕಕ್ಕೆ ಮುಂದೂಡುತ್ತಾರೆ. ಓಹ್, ನನಗೆ ತಡವಾಗುತ್ತಿದೆ. ನಾನು ಬೇಗ ಪಂಚಾಯಿತಿ ಕಚೇರಿಗೆ ಹೋಗುತ್ತೇನೆ. ಕ್ಷಮಿಸಿ

ಸಿದ್ಧಣ್ಣ, ನಾನು ಸಭೆ ಮುಗಿದ ಬಳಕಿ ನಿಮ್ಮ ಉಳಿದ ಸಂಶಯಗಳಿಗೆ ಉತ್ತರಿಸುತ್ತೇನೆ. ಅಥವಾ ನೀವೇ ನನ್ನ ಮನೆಗೆ ಬರಬಹುದು........ಹೀಗೆ ಹೇಳುತಾ ಪಾರ್ವತಮ್ಮ ಹೊರಡುತ್ತಾರೆ.

**ತರಬೇತುದಾರರ ಪಾತ್ರ :** ತರಬೇತುದಾರ ಗೊಂಬೆಯಾಟವನ್ನು ಸಾಧ್ಯವಾದಷ್ಟು ಉತ್ತಮವಾಗಿ ನಡೆಸಿಕೊಡಬೇಕು. ಬೊಂಬೆಗಳನ್ನು ಕುಣಿಸುವ ಪರಿಣಿತರ ನಡುವೆ ಉತ್ತಮ ಹೊಂದಾಣಿಕೆ ಇರಬೇಕು. ಪ್ರೇಕ್ಷಕರು ಗೊಂಬೆಯಾಟದಿಂದ ಮನರಂಜನೆ ಪಡೆಯುವುದರ ಜೊತೆಗೆ ಗ್ರಾಮಪಂಚಾಯಿತಿ ಸಭೆಗಳ ಕುರಿತು ತಿಳಿದುಕೊಳ್ಳುವಂತಿರಬೇಕು.

**ಫಲಿತಾಂಶ :** ತರಬೇತಿದಾರ ತಮ್ಮ ಮುಂದೆ ಪರದೆ ಹಿಡಿದಾಗ ಪ್ರತಿನಿಧಿಗಳಿಗೆ ಅಲ್ಲಿ ಏನು ನಡೆಯುತ್ತಿದೆ. ಎಂಬ ಕುತೂಹಲ ಕೆರಳುತ್ತದೆ ಮತ್ತು ಅವರು ತರಬೇತಿದಾರರನ್ನು ಪ್ರಶ್ನಾರ್ಥಕವಾಗಿ ನೋಡಬಹುದು. ಪ್ರಾರಂಭದಲ್ಲಿ 'ಗೊಂಬೆ'ಗಳು ಕೇಳುವ ಪ್ರಶ್ನೆಗಳಿಗೆ ಉತ್ತರಿಸಲು ಪ್ರತಿನಿಧಿಗಳು ನಾಚಿಕೆಪಟ್ಟುಕೊಳ್ಳಬಹುದು ಕೆಲವ ಸರಗಿನಿಂದ ಮುಖ ಮುಚ್ಚಿಕೊಂಡು ನಗುವುದೂ ಉಂಟು. ಆದರೆ ಕ್ರಮೇಣ ಹಿಂಜರಿಕೆ ತೊರೆದು ಅವರು ಪ್ರಶ್ನೆಗಳಿಗೆ ನಿರ್ಭೀತಿಯಿಂದ ಉತ್ತರಿಸುತ್ತಾರೆ.

ಈ ಪ್ರಕ್ರಿಯೆ ಸಾಕಷ್ಟು ಮನರಂಜನೆ ನೀಡುತ್ತದೆ. ಆದರೆ ಇದರ ಉದ್ದೇಶ ಮನರಂಜನೆ ಮಾತ್ರವಲ್ಲ, ಹೆಚ್ಚಿನ ಕಲಿಕೆ ಕೂಡಾ. ಈ ಪ್ರಕ್ರಿಯೆ ನಾಟಕದ ರೂಪದಲ್ಲಿ ಇರುವುದರಿಂದ ಮಹಿಳಾ ಪ್ರತಿನಿಧಿಗಳ ಮನದಲ್ಲಿ ಇದು ಅಚ್ಚಳಿಯದೆ ಉಳಿಯುತ್ತದೆ.

---

**ಟಿಪ್ಪಣಿಗೆ ಜಾಗ**

# ರೋಗದ ಆಟ

ಇದೊಂದು ವಿವಿಧೋದ್ದೇಶದ ಆಟ. ವಿಷಯವನ್ನಾಧರಿಸಿ ಇದನ್ನು ವಿವಿಧ ಸನ್ನಿವೇಶಗಳಲ್ಲಿ ಬಳಸಬಹುದು. ತರಬೇತಿ ಕಾರ್ಯಕ್ರಮಗಳಲ್ಲಿ ಶಿಬಿರಾರ್ಥಿಗಳಲ್ಲಿ ಅಡಗಿರುವ ಗುಣಗಳನ್ನು ಶೋಧಿಸಲು ಇದನ್ನು ಹೆಚ್ಚಾಗಿ ಬಳಸಲಾಗುತ್ತದೆ.

*ವಿಷಯ :* ರೋಗದ ಆಟ.

*ಉದ್ದೇಶ :* ಪ್ರತಿನಿಧಿಗಳಲ್ಲಿ ಅಡಗಿರುವ ಪ್ರತಿಭೆಯನ್ನು ಗುರುತಿಸುವುದು, ಹಾಗೂ ಮೌನ ಮುರಿಯುವುದು.

*ಗುಂಪಿನ ಗಾತ್ರ :* 20-25 ಮಹಿಳಾ ಚುನಾಯಿತ ಪ್ರತಿನಿಧಿಗಳು.

*ಸಮಯ :* 30 ನಿಮಿಷ

*ಸಂಯೋಜಕರು :* ಒಬ್ಬ ಅನುಭವಿ ತರಬೇತುದಾರರು.

*ಸ್ಥಳ :* ಒಂದು ಕೊಠಡಿ / ಪಡಸಾಲೆ

*ಬೇಕಾಗುವ ಸಾಮಗ್ರಿಗಳು :* ಕೊಠಡಿ ಅಥವಾ ಪಡಸಾಲೆಯ ನಡುವೆ ಒಂದು ಕುರ್ಚಿ.

ಪ್ರಕ್ರಿಯೆ : *ಒಂದನೇ ಹಂತ :* ಆಟದ ಪ್ರಾರಂಭಕ್ಕೆ ಮೊದಲು ಸಂಯೋಜಕರು ಆಟದ ನಿಯಮಗಳನ್ನು ಕುರಿತು ಪ್ರತಿನಿಧಿಗಳಿಗೆ ವಿವರಿಸಬೇಕು.



ಎರಡನೇ ಹಂತ : ಪ್ರತಿನಿಧಿಗಳಲ್ಲೊಬ್ಬರು ಸ್ವಇಚ್ಛೆಯಿಂದ ಇಲ್ಲವೇ ಸಂಯೋಜಕರ ಆದೇಶದಂತೆ ಕುರ್ಚಿಮೇಲೆ ಕುಳಿತುಕೊಳ್ಳುವರು.

*ಮೂರನೇ ಹಂತ :* ಕುರ್ಚಿಯಲ್ಲಿ ಕೂರುತ್ತಿದ್ದಂತೆ ಪ್ರತಿನಿಧಿ ಕೆಮ್ಮು, ಪೋಲಿಯೋ ಅಥವಾ ಯಾವುದೋ ಒಂದು ರೋಗಪೀಡಿತರಾದಂತೆ ನಟಿಸಬೇಕು.

*ನಾಲ್ಕನೇ ಹಂತ :* ಆ 'ರೋಗಿ' ನಂತರ ಕುರ್ಚಿಯಿಂದೆದ್ದು ಹೋಗಿ ಇನ್ನೊಬ್ಬರನ್ನು ಸ್ಪರ್ಶಿಸಬೇಕು.

*ಐದನೇ ಹಂತ :* ರೋಗಿಯಿಂದ ಸ್ಪರ್ಶಿಸಲ್ಪಟ್ಟ ಆ ರೋಗಬಂದಂತೆ ನಟಿಸಬೇಕು ಮತ್ತು ಆ ಕುರ್ಚಿಯಲ್ಲಿ ಕುಳಿತುಕೊಳ್ಳಬೇಕು.

*ಆರನೇ ಹಂತ :* ಅನಂತರ ಆ ರೋಗಿ ಮತ್ತೊಂದು ಖಾಯಿಲೆ ನಟಿಸುತ್ತ ಇನ್ನೊಬ್ಬರನ್ನು ಸ್ಪರ್ಶಿಸಬೇಕು. ಇದೇ ರೀತಿ ಸರಪಳಿ ಮುಂದುವರಿಯುತ್ತದೆ. ಎಲ್ಲಾ ಪ್ರತಿನಿಧಿಗಳೂ ಒಮ್ಮೆ ಕುರ್ಚಿಯಲ್ಲಿ ಕುಳಿತುಕೊಳ್ಳುವವರೆಗೂ ಈ ಸರಣಿ ಹೀಗೆ ಮುಂದುವರಿಯುತ್ತದೆ.

ತರಬೇತುದಾರರ ಪಾತ್ರ : ಪ್ರತಿಯೊಬ್ಬರಿಗೂ ಅವಕಾಶ ಸಿಗುವಂತೆ ತರಬೇತುದಾರರು ನೋಡಿಕೊಳ್ಳಬೇಕು. ಈ ಪ್ರಕ್ರಿಯೆಯನ್ನು ಮಹಿಳಾ ಪ್ರತಿನಿಧಿಗಳಲ್ಲಿ ಅಡಗಿರುವ ಕೌಶಲ್ಯವನ್ನು ಗುರುತಿಸಲು ಬಳಸಿಕೊಳ್ಳಬೇಕು. ಮೌನ ಮುರಿಯಲು ಹಾಗೂ ನಾಚಿಕೆ ಮತ್ತು ಹಿಂಜರಿಕೆ ಸ್ವಭಾವದ ಪ್ರತಿನಿಧಿಗಳನ್ನು ಹುರಿದುಂಬಿಸಲೂ ಈ ಪ್ರಕ್ರಿಯೆಯನ್ನು ಬಳಸಿಕೊಳ್ಳಬಹುದು. ದೊಡ್ಡ ಗುಂಪಿನಲ್ಲಿ ಅಂಥವರಿಗೆ

ತಮ್ಮ ಸಾಮರ್ಥ್ಯ ಮತ್ತು ಪ್ರತಿಭೆಯನ್ನು ಪ್ರದರ್ಶಿಸಲು ಉತ್ತಮ ಅವಕಾಶ ದೊರೆಯುತ್ತದೆ. ಈ ಆಟದ ಮೂಲಕ ತರಬೇತುದಾರರು ಕೆಲವು ಮಾನಸಿಕ ವ್ಯಾಯಾಮಗಳನ್ನು ಕಲಿಸಿಕೊಡಬಹುದು.

ಕುರ್ಚಿಯನ್ನು ರೋಗ ಮೂಲವೆಂಬಂತೆ ಬಿಂಬಿಸುವ ಮೂಲಕ ಆರೋಗ್ಯ ಸಮಸ್ಯೆಗಳತ್ತ ಪ್ರತಿನಿಧಿಗಳ ಗಮನ ಸೆಳೆಯಬಹುದು. ಕುರ್ಚಿಯನ್ನು ಅಧಿಕಾರದ ಚಿಹ್ನೆಯಂತೆ ಬಳಸಿ ಹೇಗೆ ಗ್ರಾಮಪಂಚಾಯಿತಿಯ ಪ್ರಧಾನರು ಅಧಿಕಾರ ಚಲಾಯಿಸುತ್ತಾರೆ ಎಂಬುದನ್ನೂ ತೋರಿಸಬಹುದು. ಅಲ್ಲದೆ ಪುರುಷ/ಮಹಿಳಾ/ಎಸ್.ಸಿ.-ಎಸ್.ಟಿ. ಅಥವಾ ಅಂಗವಿಕಲ ಪ್ರಧಾನರು ಅಧಿಕಾರ ವಹಿಸಿಕೊಂಡಾಗ ಹೇಗೆ ಬೇರೆ ಬೇರೆ ರೀತಿ ಕೆಲಸ ಮಾಡುತ್ತಾರೆ ಎಂಬುದನ್ನೂ ವಿವರಿಸಬಹುದು.

**ಫಲಿತಾಂಶ :** ಮಹಿಳಾ ಪ್ರತಿನಿಧಿಗಳು ತಮ್ಮಲ್ಲಿ ಅಡಗಿರುವ ಪ್ರತಿಭೆ ಬಗ್ಗೆ ಅರಿವು ಬೆಳೆಸಿಕೊಳ್ಳುತ್ತಾರೆ. ಇದೊಂದು ಮನೋರಂಜನಾತ್ಮಕ ಆಟ, ಪ್ರತಿನಿಧಿಗಳಲ್ಲಿ ಇದು ಯೋಚನಾಶಕ್ತಿಯನ್ನು ಬೆಳೆಸುವ ಪಂಚಾಯಿತಿ ಪ್ರಧಾನರ ಜವಾಬ್ದಾರಿಗಳ ಕುರಿತು ತಿಳಿದುಕೊಳ್ಳಲು ನೆರವಾಗುತ್ತದೆ.

**ಟಿಪ್ಪಣಿಗೆ ಜಾಗ**



# ನಮ್ಮ ಪ್ರಕಟಣೆಗಳು




**ಸಂಪನ್ಮೂಲ ಪುಸ್ತಕಗಳು :**

- ಪಂಚಾಯತಿ ಪರಿಹಾರ (2001)
- ಗೂಡಿನಿಂದ ಗಗನಕ್ಕೆ (2001)
- ಇದು ಸಾಧ್ಯ (1994)
- ಬನ್ನಿ, ಮಹಿಳೆಯರನ್ನು ಪ್ರಬಲಿಸೋಣ (1994)
- ಒಂದಾಗಿ ಮುನ್ನುಗ್ಗುವ (1994)

**ತರಬೇತಿ ಸಾಧನಗಳು :**

- ತರಬೇತಿ ತಂತ್ರಗಳು (2001)
- ಅನುಭವ ಗುಚ್ಛ (2001)
- ಗ್ರಾಮ ಸಭೆ - ಜನರ ಸಭೆ (2001)
- ಗ್ರಾಮ ಪಂಚಾಯತಿ ಬಜೆಟ್ (2001)
- ಭೂತದ ಬೆನ್ನು ಇರಿದಾಗ (1998)
- ಪಂಚಾಯತ್ ರಾಜ್ ಹಾಡುಗಳು (1997)
- ಹಾವು - ಏಣಿ ಆಟ (1995)
- ನಿಶೆಯಿಂದ ಉಷೆಗೆ (1995)
- ಮಹಿಳೆ ಮತ್ತು ಕಾನೂನು (1994)
- ಗ್ರಾಮ ಪಂಚಾಯ್ತಿ ಕೈಪಿಡಿ (1994)

# ನಮ್ಮ ಬಗ್ಗೆ

ಇನ್ಸ್ಟಿಟ್ಯೂಟ್ ಆಫ್ ಸೋಷಿಯಲ್ ಸ್ಟಡೀಸ್ ಟ್ರಸ್ಟ್ (ಐ.ಎಸ್.ಎಸ್.ಟಿ.) ಒಂದು ಲಾಭರಹಿತ ಸಾಮಾಜಿಕ ಅಧ್ಯಯನ ಸಂಸ್ಥೆ. ಪ್ರಧಾನ ಕಛೇರಿ ದೆಹಲಿಯಲ್ಲಿದ್ದು ಬೆಂಗಳೂರಿನಲ್ಲಿ ಪ್ರಾದೇಶಿಕ ಕಛೇರಿಯಿದೆ.

"ಸ್ಥಳೀಯ ಸರ್ಕಾರಗಳಲ್ಲಿರುವ ಮಹಿಳೆಯರ ಸಬಲೀಕರಣ" ಎಂಬುದು ಐ.ಎಸ್.ಎಸ್.ಟಿ. ಬೆಂಗಳೂರು ಕಛೇರಿಯ ಮುಖ್ಯ ಯೋಜನೆಗಳಲ್ಲಿ ಒಂದಾಗಿದೆ. ಈ ಯೋಜನೆಯಡಿಯಲ್ಲಿ ಪಂಚಾಯತಿ ಮಹಿಳಾ ಪ್ರತಿನಿಧಿಗಳಿಗೆ ಸಬಲೀಕರಣದತ್ತ ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಸಂಶೋಧನೆ, ತರಬೇತಿ ಮತ್ತು ಮಾಹಿತಿ ಸಂಗ್ರಹಣೆ ಹಾಗೂ ವಿತರಣೆ, ಸಂಪರ್ಕಜಾಲ ಮುಂತಾದ ಕೆಲಸಗಳನ್ನು ಮಾಡುತ್ತಿದೆ.

ಕರ್ನಾಟಕ ರಾಜ್ಯ ಹಾಗೂ ರಾಷ್ಟ್ರದ ಇತರೆ ರಾಜ್ಯಗಳಿಂದ ಮಹಿಳೆಯರು ಮತ್ತು ಪಂಚಾಯತ್ ರಾಜ್‌ಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ, ಈ ಮಾಹಿತಿಯನ್ನು ಪರಿಣಿತರಿಗೆ, ಸಂಘ ಸಂಸ್ಥೆಗಳಿಗೆ ಕಾರ್ಯಕರ್ತರಿಗೆ, ಆಸಕ್ತರಿಗೆ ಹಾಗೂ ಮುಖ್ಯವಾಗಿ ಚುನಾಯಿತ ಪ್ರತಿನಿಧಿಗಳಿಗೆ ತಲುಪಿಸುವ ಕೆಲಸವನ್ನು "ರಾಷ್ಟ್ರೀಯ ಸಂಪನ್ಮೂಲ ಕೇಂದ್ರ"ದ ಮೂಲಕ ಮಾಡಲಾಗುತ್ತಿದೆ. ಐ.ಎಸ್.ಎಸ್.ಟಿ. ತಂಡವು ಕ್ಷೇತ್ರಾಧಾರಿತ ಅನುಭವ, ತರಬೇತಿಗಳು ಹಾಗೂ ಅಧ್ಯಯನಗಳ ಆಧಾರದ ಮೇಲೆ ವಿವಿಧ ವಿಷಯಗಳ ಬಗ್ಗೆ ಸಂಪನ್ಮೂಲ ಪುಸ್ತಕಗಳನ್ನು ತಯಾರಿಸುವುದರ ಜೊತೆಗೆ, ತ್ರೈಮಾಸಿಕ ಸಂಪನ್ಮೂಲ ಮಾಲಿಕೆಯಾದ 'ಉಮಾ ಪ್ರಚಾರ'ವನ್ನು 3 ಭಾಷೆಗಳಲ್ಲಿ ಪ್ರಕಟಿಸುತ್ತಿದೆ. ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಪಂಚಾಯತಿ ಪ್ರತಿನಿಧಿಗಳಿಗಾಗಿ ಅದರಲ್ಲೂ ನವಸಾಕ್ಷರರರಿಗಾಗಿ "ನಮ್ಮ ಪಂಚಾಯತಿ" ಎಂಬ ಸಚಿತ್ರ ಗೋಡೆ ಪತ್ರಿಕೆ ಹೊರತರುತ್ತಿದೆ.

ಇತ್ತೀಚೆಗೆ ಶಿಕ್ಷಣ, ಮಹಿಳೆಯರ ಆರೋಗ್ಯ, ಅದರಲ್ಲೂ ಸಂತಾನೋತ್ಪತ್ತಿ ಹಾಗೂ ಹೆಚ್.ಐ.ವಿ./ ಏಡ್ಸ್ ಮುಂತಾದ ವಿಷಯಗಳನ್ನು ಕೈಗೆತ್ತಿಕೊಂಡು ಪಂಚಾಯತಿಗಳ ಮೂಲಕ ಕ್ಷೇತ್ರ ಅಧ್ಯಯನ, ಮಾಹಿತಿ ಸಂಗ್ರಹಣೆ ಹಾಗೂ ವಿನಿಮಯ, ಮುಂತಾದ ಕೆಲಸಗಳನ್ನು ಮಾಡುತ್ತಿದೆ.

